# ಹಿಂದುಸ್ತಾನಿ ಕನ್ನಡ ವ್ಯಾಕರಣ

# हिन्दुस्तानी कन्नड़ व्याकरण


ಲೇಖಕರು:

**ಗುರುನಾಥ ಜೋಶಿ,** ಬಿ. ಎ. (ಕಾ. ವಿ.)

ಟ್ರೇನಿಂಗ್ ಕಾಲೇಜ್, ಧಾರವಾಡ.

**ಭಾ. ಮಾ. ಕುಲಕರ್ಣಿ,** ವಿಶಾರದ (ಮದರಾಸ)

ಬೇಸಿಕ್ ಟ್ರೇನಿಂಗ ಸ್ಕೂಲ್, ಧಾರವಾಡ.


ಮುನ್ನುಡಿ ಬರೆದವರು:

ಕರ್ನಾಟಕ ಪ್ರಾಂತೀಯ ಹಿಂದೀ ಪ್ರಚಾರ ಸಭಾ

ಕಾರ್ಯದರ್ಶಿಗಳೂ ಮುಂಬಯಿ ಸರಕಾರದ ಹಿಂದುಸ್ತಾನೀ

ಬೋರ್ಡಿನ ಸದಸ್ಯರೂ ಆದ

**ಪಂಡಿತ ಸಿದ್ಧನಾಥ ಪಂತರು**


ಪ್ರಕಾಶಕರು:

**ರಾಮಾಶ್ರಯ ಬುಕ್ ಡಿಪೊ, ಧಾರವಾಡ.**





ಪ್ರಥಮ ಮುದ್ರಣ ] ೧೯೪೦ [ ಬೆಲೆ ೦-೮-೦

# ಮುನ್ನುಡಿ

ಯಾವುದೇ ಒಂದು ಭಾಷೆಯಲ್ಲಿ ಸಾಕಷ್ಟು ಯೋಗ್ಯತೆಯನ್ನು ಸಂಪಾದಿಸಬೇಕಾದರೆ ವ್ಯಾಕರಣದ ಅಭ್ಯಾಸವು ಅತ್ಯವಶ್ಯವಾಗಿದೆ ಎಂಬಮಾತನ್ನು ಒಪ್ಪಲೇಬೇಕಾಗಿದೆ. ಆದರೂ ಆಧುನಿಕ ಶಿಕ್ಷಣ ಪದ್ಧತಿಯಲ್ಲಿ ವ್ಯಾಕರಣ ಮತ್ತು ಭಾಷಾಂತರ ಪಾಠಗಳಿಗೆ ಗೌಣಸ್ಥಾನವೇ ಮೀಸಲಾಗಿದೆ. ಪ್ರಾಚೀನ ಕಾಲದಲ್ಲಿ ವ್ಯಾಕರಣ ಜ್ಞಾನವು ಎಷ್ಟು ಮಹತ್ವಪೂರ್ಣವಾಗಿತ್ತೆಂಬುದಕ್ಕೆ "ಯದ್ಯಪಿ ಬಹುನಾಧೀಷೇ........." ಮೊದಲಾದ ಆರ್ಯೋಕ್ತಿಗಳೇ ಸಾಕ್ಷಿ ವಿ[illegible]  ಮಾತೃಭಾಷೆಯಲ್ಲೇ ಪರ್ಯಾಪ್ತ ವ್ಯಾಕರಣಬಲ ಇಲ್ಲವೆಂದ ಮೇಲೆ ಅನ್ಯಭಾಷೆಯ ಪರಿಚಯುವು ಕಷ್ಟಸಾಧ್ಯವು. ಇಂಥಾ ಪರಿಸ್ಥಿತಿಯಲ್ಲಿ ಭಾಷಾಭ್ಯಾಸಿಗಳಿಗೆ ಅನುಕೂಲವಾದ ಸಾಹಿತ್ಯವನ್ನು ಸಿದ್ಧಗೊಳಿಸುವದು ಅನುಭವಿಗಳಾದ ವಿದ್ವಾಂಸರ ಕರ್ತವ್ಯ. ಈ ಭಾಗದಲ್ಲಿ ನನ್ನ ಸಹಕಾರಿಗಳಿಬ್ಬರು ಮುನ್ನಡೆಯಿಡುತ್ತಿರುವದು ತುಂಬಾ ಸಂತೋಷದ ವಿಷಯ.

ಲೇಖಕರ ಪ್ರಥಮ ಪ್ರಯತ್ನವು ಅಪೇಕ್ಷಿಸಿದ್ದಕ್ಕಿಂತ ಹೆಚ್ಚು ಸಫಲವಾಗಿದೆಯೆನ್ನಲು ಅಡ್ಡಿಯಿಲ್ಲ. ಮುಂಬಯಿ ಸರಕಾರದ ವಿದ್ಯಾಖಾತೆಯ ಅಭ್ಯಾಸ ಪತ್ರಿಕೆಯನ್ನು ಅನುಸರಿಸಿ ಈ ಪುಸ್ತಕವು ಬರೆಯಲ್ಪಟ್ಟಿದೆ. ಆದರೆ ಪುಸ್ತಕವನ್ನು ಸೂಕ್ಷ್ಮವಾಗಿ ಆಮೂಲಾಗ್ರ ಪರಿಶೀಲಿಸಿ ನೋಡಿದರೆ ಇದರಲ್ಲಿ ಮದರಾಸು ಮತ್ತು ಮೈಸೂರು ಸ್ಕೂಲುಗಳ ಹಿಂದೀ ಅಭ್ಯಾಸ ಕ್ರಮಗಳೂ ಅಡಕವಾಗಿವೆ ಎಂಬ ಅಂಶವನ್ನು ಮನಗಾಣಬಹುದು. ಈ ಪುಸ್ತಕದ ಇನ್ನೊಂದು ವಿಶೇಷತೆಯೇನಂದರೆ— ವ್ಯಾಕರಣ ಶಿಕ್ಷಣದ ಜೊತೆಗೆ ತದನುಕೂಲವಾದ ಭಾಷಾಂತರ ಪಾಠಗಳು ಸೇರಿಸಲ್ಪಟ್ಟಿವೆ. ಪ್ರಯುಕ್ತ, ಈ ರಚನೆಯು ಅಖಿಲ ಕರ್ನಾಟಕದ ಹಿಂದೀ ಪ್ರೇಮಿಗಳ ಆದರಕ್ಕೆ ಪಾತ್ರವಾಗಲೆಂದು ನನ್ನ ಹಾರೈಕೆ.

ಹಿಂದೀ ಪ್ರಚಾರ ಸಭಾ
ಧಾರವಾಡ

ವಿನೀತ—
ಸಿದ್ಧನಾಥ ಪಂತ

# ಲೇಖಕರ ನಿವೇದನೆ

ಕರ್ನಾಟಕದಲ್ಲಿ ಇತ್ತೀಚೆಗೆ ಹಿಂದೀ (ಹಿಂದುಸ್ತಾನಿ ಭಾಷೆಯ) ಪ್ರಚಾರವು ಭರದಿಂದ ಸಾಗಿದೆ. ಮೈಸೂರು, ಮುಂಬಯಿ, ಮದ್ರಾಸ ಸರಕಾರಗಳೂ ಈ ಭಾಷೆಯ ಪ್ರಚಾರಕ್ಕೆ ಪ್ರೋತ್ಸಾಹವನ್ನು ಕೊಟ್ಟಿವೆ. ದಕ್ಷಿಣ ಭಾರತ ಹಿಂದೀ ಪ್ರಚಾರ ಸಭೆಯ ಪರೀಕ್ಷೆಗಳಲ್ಲಿ ನಮ್ಮ ಪ್ರಾಂತದ ಸಾವಿರಾರು ವಿದ್ಯಾರ್ಥಿಗಳು ಪ್ರತಿವರ್ಷವೂ ಉತ್ತೀರ್ಣರಾಗುತ್ತಿದ್ದಾರೆ. ಆದರೂ ಅಭ್ಯಾಸಿಗಳಿಗೆ ಇದುವರೆಗೆ ದಕ್ಷಿಣ ಭಾರತ ಹಿಂದೀ ಪ್ರಚಾರ ಸಭೆಯಿಂದ ಪ್ರಕಾಶಿತವಾದ ಶ್ರೀ|| ಸಿದ್ಧನಾಥ ಪಂತರ 'ಹಿಂದೀ ಕನ್ನಡ ಸ್ವಬೋಧಿನಿ'ಯ ಹೊರತು ಹಿಂದೀ ವ್ಯಾಕರಣವನ್ನು ಕಲಿಸಲು ಯಾವ ಸಾಹಿತ್ಯವೂ ಇರಲಿಲ್ಲ. ಒಂದು ಸರಳವಾದ 'ಹಿಂದುಸ್ತಾನಿ ಕನ್ನಡ ವ್ಯಾಕರಣ'ದ ಆಗತ್ಯವು ಇದ್ದಿತು. ಈ ಕೊರತೆಯನ್ನು ಹೊಗಲಾಡಿಸಲು ಧಾರವಾಡದ **ರಾಮಾಶ್ರಯ ಬುಕ್ ಡಿಪೋದವರು** ಮುಂದೆ ಬಂದುದು ಅಭಿನಂದನೀಯವಾಗಿದೆ.

ಪಂಡಿತ ಸಿದ್ಧನಾಥ ಪಂತರು ಹಿಂದುಸ್ತಾನೀ ಶಿಕ್ಷಕ ವಿದ್ಯಾಲಯದ ಆಚಾರ್ಯರಾಗಿದ್ದಾಗ ಈ ಪುಸ್ತಕವನ್ನು ಸಿದ್ಧಗೊಳಿಸಲು ಪ್ರೇರೇಪಿಸಿ ನಮಗೆ ಅನೇಕ ಸಲಹೆಗಳನ್ನು ಕೊಟ್ಟರು. ಪುಸ್ತಕವು ತಯಾರಾದ ಮೇಲೆ ಅದಕ್ಕೆ ಮುನ್ನುಡಿಯನ್ನೂ ಬರೆದರು. ಅವರ ಸಲಹೆಗಳನ್ನು ನಾವು ಮಾನ್ಯ ಮಾಡಿ ಪುಸ್ತಕವು ಎಲ್ಲ ಬಗೆಯಿಂದಲೂ ಉಪಯುಕ್ತವಾಗುವಂತೆ ಪ್ರಯತ್ನಿಸಿದ್ದೇವೆ ತಜ್ಞರು ಇದರಲ್ಲಿ ತಪ್ಪು ತಡೆಗಳುಂಟಾಗಿದ್ದರೆ ಸೂಚಿಸಬೇಕೆಂದೂ ಬಿನ್ನವಿಸಿ ಕೊಳ್ಳುತ್ತೇನೆ. ಮತ್ತು ಆ ತಪ್ಪುಗಳನ್ನು ಎರಡನೆಯ ಸಂಸ್ಕರಣದಲ್ಲಿ ತಿದ್ದಿಕೊಂಡು ಪುಸ್ತಕವನ್ನು ಹೆಚ್ಚು ಅನುಕೂಲವಾಗುವಂತೆ ಮಾಡುವೆವು.

ಈ ಕಾರ್ಯದಲ್ಲಿ ನಮಗೆ ನೆರವಾದ ಶ್ರೀಯುತ ಪಂತರಿಗೂ, ರಾಮಾಶ್ರಯ ಬುಕ್ ಡಿಪೋದವರಿಗೂ ಅಲ್ಪಾವಧಿಯಲ್ಲಿ ಅಂದವಾಗಿ ಮುದ್ರಿಸಿ ಕೊಟ್ಟ ಧಾರವಾಡ ಪ್ರೆಸ್ಸಿನವರಿಗೂ ನಮ್ಮ ಅನೇಕ ವಂದನೆಗಳು.

**ಹಿಂದುಸ್ತಾನೀ ಶಿಕ್ಷಕ ವಿದ್ಯಾಲಯ,**
**ಧಾರವಾಡ**

**ಗುರುನಾಥ ಜೋಶಿ**
**ಭಾ. ಮಾ. ಕುಲಕರ್ಣಿ**

# ಅನುಕ್ರಮಣಿಕೆ

# ಹಿಂದುಸ್ತಾನೀ ವ್ಯಾಕರಣ
# हिन्दुस्तानी व्याकरण



## ವರ್ಣಮಾಲೆ

### ಸ್ವರಗಳು

अ आ इ ई उ ऊ ऋ ए ऐ ओ औ अं अः

### ವ್ಯಂಜನಗಳು

क ख ग घ ङ; च छ ज झ ञ

ट ठ ड ढ ण; त थ द ध न

प फ ब भ म

य र ल व श ष स ह क्ष त्र ज्ञ

ಮುಂಬಯಿ ಸರಕಾರದಿಂದ ಮಂಜೂರಾದ ಅಕ್ಷರಗಳ ಹೊಸ ರೂಪಗಳು ಈ ರೀತಿಯಾಗಿರುತ್ತವೆ.

### ಸ್ವರಗಳು

अ आ अि अी अु अू अृ अे अै ओ औ अं अः।

### ವ್ಯಂಜನಗಳು

ल, श, ष

## ಕಾಗುಣಿತಗಳು

क का कि की कु कू कृ के कै को कौ कं कः

च चा चि ची चु चू चृ चे चै चो चौ चं चः

ट टा टि टी टु टू टृ टे टै टो टौ टं टः

त ता ति ती तु तू तृ ते तै तो तौ तं तः

प पा पि पी पु पू पृ पे पै पो पौ पं पः

## ಒತ್ತಕ್ಷರಗಳು.

| | | | | | |
|---|---|---|---|---|---|
| ग | + | ल | = | ग्ल | ( ग्लानि ) |
| घ | + | न | = | घ्न | ( विघ्न ) |
| च | + | च | = | च्च | ( कच्चा ) |
| त | + | थ | = | त्थ | ( पत्थर ) |
| न | + | न | = | न्न | ( अन्न ) |
| ष | + | क | = | ष्क | ( शुष्क ) |
| ष | + | म | = | ष्म | ( चष्मा ) |
| ल | + | ल | = | ल्ल | ( उल्लू ) |

ಕೆಲವು ಅಕ್ಷರಗಳಿಗೆ र ಕಾರದ ಒತ್ತುಗಳನ್ನು ಹೀಗೆ ಕೊಡುತ್ತಾರೆ.

| | | | | | |
|---|---|---|---|---|---|
| छ | + | र | = | छ्र | ( कृच्छ्र ) |
| ट | + | र | = | ट्र | ( राष्ट्र ) |
| ड | + | र | = | ड्र | ( त्रिपुंड्र ) |
| द् | + | र | = | द्र | ( भद्र ) |
| क | + | र | = | क्र | ( क्रम ) |
| म | + | र | = | म्र | ( नम्र ) |

ಕೆಲವು ಅಕ್ಷರಗಳಿಗೆ र ಕಾರದ ಒತ್ತುಗಳನ್ನು ಹೀಗೆ ಸೇರಿಸುತ್ತಾರೆ:-

अर्जुन, अर्थ, धर्म, कर्म, जार्ज, मर्म

द, ध, ह ಅಕ್ಷರಗಳು ಹೀಗೆ ಸೇರಿಕೊಳ್ಳುತ್ತವೆ:-

द + ध = द्ध या द्‌ध ( बुद्धि, बुद्‌धि )

द + म = द्म या द्‌म ( पद्म, पद्‌म )

द + य = द्य या द्‌य ( विद्या, विद्‌या )

द + व = द्व या द्‌व ( द्वापर, द्‌वापर )

ह + म = ह्म या ह्‌म ( ब्राह्मण, ब्राह्‌मण )

ह + य = ह्य या ह्‌य ( गुह्य, गुह्‌य )

ट, ड ಅಕ್ಷರಗಳು ಹೀಗೆ ಸೇರುತ್ತವೆ:-

ट + ट = ट्ट या ट्‌ट ( टट्टू, टट्‌टू )

ड + ढ = ड्ढ या ड्‌ढ ( गड्ढा, गड्‌ढा )

ಅಂಕೆಗಳು

१ २ ३ ४ ५ ६ ७ ८ ९ १०

ಕೆಲವು ವ್ಯಂಜನಗಳ ಕೆಳಗೆ ಚುಕ್ಕೆಗಳನ್ನಿಡುವರು. ಅವುಗಳನ್ನು ಗಂಟಲದಿಂದ ಉಚ್ಚರಿಸಬೇಕಾಗುವುದು:-

क़ ख़ ग़ ज़ फ़ ड़ ढ़

# ೧ನೆಯ ಪಾಠ

## ನಾಮಗಳು

ಹಿಂದುಸ್ತಾನಿಯಲ್ಲಿ ವಸ್ತುವಿನ ಹೆಸರುಗಳು ನಾಮಗಳೆನಿಸುವವು. ಈ ನಾಮಗಳಿಗೆ "ಸಂಜ್ಞಾ" ಎನ್ನುವರು.

| | | | |
|---|---|---|---|
| मोहन | ಮೋಹನ | राधा | ರಾಧೆ |
| पहाड़ | ಬೆಟ್ಟ | घोड़ा | ಕುದುರೆ |
| घर | ಮನೆ | कागज़ | ಕಾಗದ |
| आदमी | ಮನುಷ್ಯ | औरत | ಹೆಂಗುಸು |
| लड़का | ಹುಡುಗ | लड़की | ಹುಡುಗಿ |
| गाँव | ಹಳ್ಳಿ | शहर | ಪಟ್ಟಣ |
| फल | ಹಣ್ಣು | कमरा | ಕೋಣೆ |
| पेड़ | ಮರ | घड़ी | ಗಡಿಯಾರ |
| कपड़ा | ಬಟ್ಟೆ | हाथी | ಆನೆ |

ಕನ್ನಡದ ವಾಕ್ಯರಚನೆಯಂತೆಯೆ ಹಿಂದುಸ್ತಾನಿಯ ವಾಕ್ಯರಚನೆಯೂ ಇರುವುದು. ಮೊದಲು ಕರ್ತೃ, ಆ ಮೇಲೆ ಕರ್ಮ, ಕೊನೆಗೆ ಕ್ರಿಯಾಪದವು ಬರುವುದು.

ಉದಾಹರಣೆ: ಮೋಹನನು ಹಣ್ಣನ್ನು ತಿನ್ನುತ್ತಾನೆ.

मोहन फल खाता है।

## ಸರ್ವನಾಮಗಳು

ನಾಮಗಳ ಬದಲಾಗಿ ಬರುವ ಶಬ್ದಗಳಿಗೆ ಸರ್ವನಾಮಗಳೆಂದು ಎನ್ನುವರು.

| ಏಕವಚನ | ಬಹುವಚನ |
|---|---|
| मैं ನಾನು | हम ನಾವು |
| तू ನೀನು | तुम ನೀವು<br>आप ತಾವು |
| वह ಅವನು, ಅವಳು, ಅದು<br>यह ಇವನು, ಇವಳು, ಇದು | वे ಅವರು, ಅವು<br>ये ಇವರು, ಇವು |

हो ಇರು ಎಂಬ ಸಹಾಯಕ ಕ್ರಿಯಾಪದದ ಕೂಡ ಸರ್ವನಾಮಗಳು

| ಏಕವಚನ | ಬಹುವಚನ |
|---|---|
| मैं हूँ ನಾನು ಇದ್ದೇನೆ. | हम हैं ನಾವು ಇದ್ದೇವೆ |
| तू है ನೀನು ಇದ್ದೀ. | तुम हो ನೀವು ಇದ್ದೀರಿ.<br>आप हैं ತಾವು ಇದ್ದೀರಿ. |
| वह है ಅವನು ಇದ್ದಾನೆ.<br>ಅವಳು ಇದ್ದಾಳೆ.<br>ಅದು ಇದೆ. | वे हैं ಅವರು ಇದ್ದಾರೆ.<br>ಅವು ಇವೆ. |

## ಅಭ್ಯಾಸ ೧

| | |
|---|---|
| किताब<br>पुस्तक ಪುಸ್ತಕ | स्याही ಮಸಿ<br>कुर्सी ಕುರ್ಚಿ |

| | | | |
|---|---|---|---|
| मेज़ | ಮೇಜು | क्या | ಏನು |
| कौन | ಯಾರು | दवात | ದೌತಿ, ಮಸಿಕುಡಿಕೆ |
| क़लम | ಲೆಕ್ಕಣಿಕೆ | यहाँ | ಇಲ್ಲಿ |
| कहाँ | ಎಲ್ಲಿ | वहाँ | ಅಲ್ಲಿ |

**ಕನ್ನಡಕ್ಕೆ ಭಾಷಾಂತರಿಸಿರಿ:—**

१. यह किताब है। २. यह क्या है? ३. मैं मोहन हूँ। ४. मैं कौन हूँ? ५. वह क़लम है। ६. वह क्या है? ७. मेज़ यहाँ है। ८. मेज़ कहाँ है? ९. दवात वहाँ है। १०. दवात कहाँ है?

**ಹಿಂದುಸ್ತಾನಿಗೆ ಭಾಷಾಂತರಿಸಿರಿ:—**

೧. ನಾನು ಹುಡುಗನಿದ್ದೇನೆ. ೨. ಅವಳು ಹುಡುಗೆ ಇದ್ದಾಳೆ. ೩. ನಾನು ಯಾರು? ೪. ಅವಳು ಯಾರು? ೫. ಪುಸ್ತಕವು ಇಲ್ಲಿ ಇದೆ. ೬. ಪರ್ವತವು ಅಲ್ಲಿ ಇದೆ. ೭. ಮನುಷ್ಯನು ಎಲ್ಲಿ ಇದ್ದಾನೆ? ೮ ಅದು ಕಾಗದವು ಇರುತ್ತದೆ. ೯. ಅದು ಏನು? ೧೦. ಇದು ಕುದುರೆ ಇರುತ್ತದೆ.

## ಪಾಠ ೨.

### ಸಾಮಾನ್ಯ ವರ್ತಮಾನಕಾಲ

ಈ ಕಾಲದಲ್ಲಿ ಧಾತುವಿಗೆ ಪುಲ್ಲಿಂಗ ಏಕವಚನದಲ್ಲಿ ता, ಬಹುವಚನದಲ್ಲಿ ते; ಸ್ತ್ರೀಲಿಂಗ ಏಕವಚನ ಮತ್ತು ಬಹುವಚನಗಳಲ್ಲಿ ती ಪ್ರತ್ಯಯಗಳನ್ನು ಸೇರಿಸಿ हो ಧಾತುವಿನ ರೂಪಗಳನ್ನು ಪುರುಷ-ವಚನಗಳಿಗನುಸರಿಸಿ ಅಂತ್ಯದಲ್ಲಿ ಜೋಡಿಸಬೇಕು.

## पढ़ ಓದು

### ಕರ್ತೃ–ಪುಲ್ಲಿಂಗ

| ಏಕವಚನ | | ಬಹುವಚನ | |
|---|---|---|---|
| मैं पढ़ता हूँ | ನಾನು ಓದುತ್ತೇನೆ. | हम पढ़ते हैं | ನಾವು ಓದುತ್ತೇವೆ. |
| तू पढ़ता है | ನೀನು ಓದುತ್ತೀ. | तुम पढ़ते हो | ನೀವು ಓದುತ್ತೀರಿ. |
| | | आप पढ़ते हैं | ತಾವು ಓದುತ್ತೀರಿ |
| वह पढ़ता है | ಅವನು ಓದುತ್ತಾನೆ. | वे पढ़ते हैं | ಅವರು ಓದುತ್ತಾರೆ. |
| | ಅದು ಓದುತ್ತದೆ | | ಅವು ಓದುತ್ತವೆ. |

### ಕರ್ತೃ–ಸ್ತ್ರೀಲಿಂಗ

| | | | |
|---|---|---|---|
| मैं पढ़ती हूँ | ನಾನು ಓದುತ್ತೇನೆ. | हम पढ़ती हैं | ನಾವು ಓದುತ್ತೇವೆ. |
| तू पढ़ती है | ನೀನು ಓದುತ್ತೀ. | तुम पढ़ती हो | ನೀವು ಓದುತ್ತೀರಿ. |
| | | आप पढ़ती हैं | ತಾವು ಓದುತ್ತೀರಿ. |
| वह पढ़ती है | ಅವಳು ಓದುತ್ತಾಳೆ. | वे पढ़ती हैं | ಅವರು ಓದುತ್ತಾರೆ |

## ಅಭ್ಯಾಸ ೨.

| | | | |
|---|---|---|---|
| खा | ತಿನ್ನು | पी | ಕುಡಿ |
| आ | ಬಾ | जा | ಹೋಗು |
| बोल | ಮಾತನಾಡು | खेल | ಆಟವಾಡು |
| उठ | ಏಳು | बैठ | ಕುಳಿತುಕೊಳ್ಳು |
| कर | ಮಾಡು | गेंद | ಚೆಂಡು |
| पानी | ನೀರು | फल | ಹಣ್ಣು |
| ख़त | ಪತ್ರ, ಕಾಗದ | मदरसा | ಪಾಠಶಾಲೆ |
| लिख | ಬರೆ | देख | ನೋಡು |

**ಕನ್ನಡಕ್ಕೆ ಭಾಷಾಂತರಿಸಿರಿ:—**

१. मैं खाता हूँ। २. तुम क्या खाते हो? ३. सीता गेंद खेलती है। ४. राम मदरसा जाता है। ५. तुम कहाँ जाते हो? ६. हम पानी पीते हैं। ७. वे हिंदुस्तानी बोलती हैं। ८. आप किताब पढ़ते हैं। ९. वह ख़त लिखता है। १०. तू क्या करता है?

**ಹಿಂದುಸ್ತಾನಿಗೆ ಭಾಷಾಂತರಿಸಿರಿ:—**

೧. ಜೋಸಫನು ಇಲ್ಲಿಗೆ ಬರುತ್ತಾನೆ. ೨. ಸರೋಜನಿಯು ಪತ್ರವನ್ನು ಓದುತ್ತಾಳೆ. ೩. ಬಸವನು ಚೆಂಡನ್ನು ಆಡುತ್ತಾನೆ. ೪. ಅವರು ಎಲ್ಲಿಗೆ ಹೋಗುತ್ತಾರೆ? ೫. ನೀವು ಏನು ಮಾಡುತ್ತೀರಿ? ೬. ಅವನು ಕುಳಿತುಕೊಳ್ಳುತ್ತಾನೆ. ೭. ಆನಂದನು ನೀರು ಕುಡಿಯುತ್ತಾನೆ. ೮. ಸೀತೆಯು ಹಣ್ಣನ್ನು ತಿನ್ನುತ್ತಾಳೆ. ೯. ತಾವು ಏನು ಬರೆಯುತ್ತೀರಿ ? ೧೦. ನಾವು ನೋಡುತ್ತೇವೆ.

## ಪಾಠ ೩.

### ಸಾಮಾನ್ಯ ಭವಿಷ್ಯತ್ಕಾಲ

ಭವಿಷ್ಯತ್ಕಾಲದಲ್ಲಿ अ ಕಾರಂತ ಧಾತುವಿಗೆ ಪುಲ್ಲಿಂಗ ಉತ್ತಮ ಪುರುಷ ಏಕವಚನ( मैं )ದಲ್ಲಿ ऊंगा, ಮಧ್ಯಮ ಪುರುಷ ಬಹುವಚನ [तुम] ದಲ್ಲಿ ओगे ಪ್ರತ್ಯಯಗಳು ಸೇರುತ್ತವೆ. ಇತರ ಪುರುಷಗಳ ಏಕವಚನಗಳಲ್ಲಿ एगा ಬಹುವಚನಗಳಲ್ಲಿ एंगे ಪ್ರತ್ಯಯಗಳನ್ನು ಸೇರಿಸುವದರಿಂದ ಭವಿಷ್ಯತ್ಕಾಲವಾಗುತ್ತದೆ.

ಕರ್ತೃವು ಸ್ತ್ರೀಲಿಂಗವಿದ್ದಾಗ ಪ್ರತ್ಯಯಗಳ ಅಂತ್ಯದ गा, गे ಗಳು गी ಆಗುತ್ತವೆ.

### बैठ ಕುಳಿತುಕೊಳ್ಳು

#### ಕರ್ತೃ-ಪುಲ್ಲಿಂಗ

| ಏಕವಚನ | | ಬಹುವಚನ | |
|---|---|---|---|
| मैं बैठूंगा | ನಾನು ಕುಳಿತುಕೊಳ್ಳುವೆನು. | हम बैठेंगे | ನಾವು ಕುಳಿತುಕೊಳ್ಳುವೆವು. |
| तू बैठेगा | ನೀನು ಕುಳಿತುಕೊಳ್ಳುವಿ. | तुम बैठोगे | ನೀವು ಕುಳಿತುಕೊಳ್ಳುವಿರಿ. |
| | | आप बैठेंगे | ತಾವು ಕುಳಿತುಕೊಳ್ಳುವಿರಿ. |
| वह बैठेगा | ಅವನು ಕುಳಿತುಕೊಳ್ಳುವನು.<br>ಅದು ಕುಳಿತುಕೊಳ್ಳುವದು. | वे बैठेंगे | ಅವರು ಕುಳಿತುಕೊಳ್ಳುವರು.<br>ಅವು ಕುಳಿತುಕೊಳ್ಳುವವು. |

#### ಕರ್ತೃ-ಸ್ತ್ರೀಲಿಂಗ

| | | | |
|---|---|---|---|
| मैं बैठूंगी | ನಾನು ಕುಳಿತುಕೊಳ್ಳುವೆನು. | हम बैठेंगी | ನಾವು ಕುಳಿತುಕೊಳ್ಳುವೆವು |
| तू बैठेगी | ನೀನು ಕುಳಿತುಕೊಳ್ಳುವಿ | तुम बैठोगी | ನೀವು ಕುಳಿತುಕೊಳ್ಳುವಿರಿ. |
| | | आप बैठेंगी | ತಾವು ಕುಳಿತುಕೊಳ್ಳುವಿರಿ. |
| वह बैठेगी | ಅವಳು ಕುಳಿತುಕೊಳ್ಳುವಳು. | वे बैठेंगी | ಅವರು ಕುಳಿತುಕೊಳ್ಳುವರು. |

### ಅಭ್ಯಾಸ ೩.

| | | | |
|---|---|---|---|
| सीख | ಕಲಿ | सिखा | ಕಲಿಸು |
| जान | ತಿಳಿ | पहिचान | ಗುರುತಿಸು |

| | | | |
|---|---|---|---|
| सुन | ಆಲಿಸು | पूछ | ಕೇಳು |
| पढ़ा | ಓದಿಸು | लिखा | ಬರೆಯಿಸು |
| उस्ताद, अध्यापक | ಗುರು, ಮಾಸ್ತರ | विद्यार्थी | ವಿದ್ಯಾರ್ಥಿ |
| भाई | ಸಹೋದರ | बहन | ಸಹೋದರಿ |
| माँ | ತಾಯಿ | पिता | ತಂದೆ |
| कल | ನಾಳೆ, ನಿನ್ನೆ | परसों | ನಾಡದು, ಮೊನ್ನೆ |

**ಕನ್ನಡಕ್ಕೆ ಭಾಷಾಂತರಿಸಿರಿ:—**

१. बहन परसों बेंगलोर जायेगी। २. पिताजी कल बंबई जायेंगे। ३. मैं अंग्रेजी सीखूंगा। ४. अध्यापक किताब पढ़ायेंगे। ५. सीता गीत सुनेगी। ६. भाई, तुम कहाँ बैठोगे? ७. माँ क्या पूछेगी? ८. आप परसों क्या लिखायेंगे? ९. वे कल सिनेमा देखेंगे। १०. वह पहिचानेगा?

**ಹಿಂದುಸ್ತಾನಿಗೆ ಭಾಷಾಂತರಿಸಿರಿ:—**

೧. ಮೋಹನನು ನಾಳೆ ಚೆಂಡನ್ನು ಆಡುವನು. ೨. ನಾನು ನೋಡುವೆನು. ೩. ಸೀತೆಯು ಬರುವಳು. ೪. ಅವರು ಪುಸ್ತಕವನ್ನು ಓದುವರು. ೫. ನೀವು ವರ್ತಮಾನ ಪತ್ರವನ್ನು ಓದುವಿರಿ. ೬. ಅವಳು ನಾಳೆ ಬೆಂಗಳೂರಿಗೆ ಪತ್ರ ಬರೆಯುವಳೊ? ೭. ಸಹೋದರನು ಪುಸ್ತಕವನ್ನು ಕೊಡುವನು. ೮. ತಂದೆಯುವರು ಏನು ಓದಿಸುವರು. ೯. ತಾಯಿಯು ಏನು ಕೊಡುವಳು? ೧೦. ಸಹೋದರಿಯು ಆಲಿಸುವಳು.

# ಪಾಠ ೪.

## ಸಾಮಾನ್ಯ ಭೂತಕಾಲ

अಕಾರಾಂತ ಧಾತುಗಳಿಗೆ ಪುಲ್ಲಿಂಗ ಏಕವಚನದಲ್ಲಿ आ, ಬಹುವಚನದಲ್ಲಿ ए; ಸ್ತ್ರೀಲಿಂಗ ಏಕವಚನದಲ್ಲಿ ई, ಬಹುವಚನದಲ್ಲಿ ईं ಪ್ರತ್ಯಗಳನ್ನೂ ಉಳಿದ ಧಾತುಗಳಿಗೆ ಲಿಂಗವಚನಗಳಿಗೆ ಅನುಸಾರವಾಗಿ या, ये; यी, यीं ಪ್ರತ್ಯಯಗಳನ್ನು ಸೇರಿಸುವುದರಿಂದ ಸಾಮಾನ್ಯ ಭೂತಕಾಲವಾಗುತ್ತದೆ.

### उठ ಏಳು

### ಕರ್ತೃ—ಪುಲ್ಲಿಂಗ

| ಏಕವಚನ | | ಬಹುವಚನ | |
|---|---|---|---|
| मैं उठा | ನಾನು ಎದ್ದೆನು. | हम उठे | ನಾವು ಎದ್ದೆವು. |
| तू उठा | ನೀನು ಎದ್ದೆ. | तुम उठे | ನೀವು ಎದ್ದಿರಿ. |
| | | आप उठे | ತಾವು ಎದ್ದಿರಿ. |
| वह उठा | ಅವನು ಎದ್ದನು.<br>ಅದು ಎದ್ದಿತು. | वे उठे | ಅವರು ಎದ್ದರು.<br>ಅವು ಎದ್ದವು. |

### ಕರ್ತೃ—ಸ್ತ್ರೀಲಿಂಗ

| | | | |
|---|---|---|---|
| मैं उठी | ನಾನು ಎದ್ದೆನು. | हम उठीं | ನಾವು ಎದ್ದೆವು. |
| तू उठी | ನೀನು ಎದ್ದೆ. | तुम उठीं | ನೀವು ಎದ್ದಿರಿ. |
| | | आप उठीं | ತಾವು ಎದ್ದಿರಿ. |
| वह उठी | ಅವಳು ಎದ್ದಳು. | वे उठीं | ಅವರು ಎದ್ದರು. |

## आ ಬಾ

### *ಕರ್ತೃ-ಪುಲ್ಲಿಂಗ

मैं आया ನಾನು ಬಂದೆನು. हम आये ನಾವು ಬಂದೆವು.

तू आया ನೀನು ಬಂದೆ. तुम आये ನೀವು ಬಂದಿರಿ.

आप आये ತಾವು ಬಂದಿರಿ.

वह आया ಅವನು ಬಂದನು. ಅದು ಬಂತು. वे आये ಅವರು ಬಂದರು. ಅವು ಬಂದವು

### ಕರ್ತೃ-ಸ್ತ್ರೀಲಿಂಗ

मैं आयीं ನಾನು ಬಂದೆನು. हम आयीं ನಾವು ಬಂದೆವು.

तू आयी ನೀನು ಬಂದೆ. तुम आयीं ನೀವು ಬಂದಿರಿ.

आप आयीं ತಾವು ಬಂದಿರಿ.

वह आयी ಅವಳು ಬಂದಳು. वे आयीं ಅವರು ಬಂದರು.

हो ಮತ್ತು जा ಧಾತುಗಳ ಕೆಳಗಿನ ರೂಪಗಳನ್ನು ಹೊಂದುತ್ತವೆ.

## हो ಆಗು

### ಕರ್ತೃ-ಪುಲ್ಲಿಂಗ

| ಏಕವಚನ | | ಬಹುವಚನ | |
|---|---|---|---|
| मैं हुआ | ನಾನು ಆದೆನು. | हम हुए | ನಾವು ಆದೆವು. |
| तू हुआ | ನೀನು ಆದೆ. | तुम हुए | ನೀವು ಆದಿರಿ. |
| | | आप हुए | ತಾವು ಆದಿರಿ. |
| वह हुआ | ಅವನು ಆದನು. ಅದು ಆಯಿತು. | वे हुए | ಅವರು ಆದರು. ಅವು ಆದವು. |

### ಕರ್ತೃ-ಸ್ತ್ರೀಲಿಂಗ

| | | | |
|---|---|---|---|
| मैं हुई | ನಾನು ಆದೆನು. | हम हुईं | ನಾವು ಆದೆವು. |
| तू हुई | ನೀನು ಆದೆ. | तुम हुईं | ನೀವು ಆದಿರಿ. |
| | | आप हुईं | ತಾವು ಆದಿರಿ. |
| वह हुई | ಅವಳು ಆದಳು. | वे हुईं | ಅವರು ಆದರು. |

## जा ಹೋಗು

### ಕರ್ತೃ-ಪುಲಿಂಗ

| | | | |
|---|---|---|---|
| मैं गया | ನಾನು ಹೋದೆನು. | हम गये | ನಾವು ಹೋದೆವು. |
| तू गया | ನೀನು ಹೋದೆ. | तुम गये | ನೀವು ಹೋದಿರಿ. |
| | | आप गये | ತಾವು ಹೋದಿರಿ. |
| वह गया | ಅವನು ಹೋದನು | वे गये | ಅವರು ಹೋದರು. |
| | ಅದು ಹೋಯಿತು. | | ಅವು ಹೋದವು. |

### ಕರ್ತೃ-ಸ್ತ್ರೀಲ್ಲಿಂಗ

| | | | |
|---|---|---|---|
| मैं गयी | ನಾನು ಹೋದೆನು. | हम गयीं | ನಾವು ಹೋದೆವು. |
| तू गयी | ನೀನು ಹೋದೆ. | तुम गयीं | ನೀವು ಹೋದಿರಿ. |
| | | आप गयीं | ತಾವು ಹೋದಿರಿ |
| वह गयी | ಅವಳು ಹೋದಳು. | वे गयीं | ಅವರು ಹೋದರು. |

## ಅಭ್ಯಾಸ ೪.

| | | | |
|---|---|---|---|
| चल | ನಡೆ | दौड़ | ಓಡು |
| सो | ಮಲಗು, ನಿದ್ರಿಸು | सुना | ಹೇಳು, ಕೇಳಿಸು |
| मार | ಹೊಡೆ | जाग | ಎಚ್ಚರಾಗು |
| हँस | ನಗು | ठहर | ನಿಲ್ಲು |
| ला | ತರು | लौट | ಹಿಂತಿರುಗು |
| तरकारी | ಕಾಯಿಪಲ್ಲೆ | बाज़ार | ಪೇಟೆ |
| खिलौना | ಆಟಿಗೆ ಸಾಮಾನು | दफ्तर | ಕಚೇರಿ |
| कुर्ता | ಪೈರಣ, ಅಂಗಿ | अदालत | ನ್ಯಾಯಾಲಯ, ಕೋರ್ಟು |
| मिठाई | ಮಿಠಾಯಿ | डाक-घर | ಅಂಚೆ ಕಚೇರಿ, ಪೋಸ್ಟ-ಆಫೀಸ್ |
| कहानी | ಕತೆ | फूल | ಹೂವು |
| घर | ಮನೆ | कमरा | ಕೋಣೆ |

**ಕನ್ನಡಕ್ಕೆ ಭಾಷಾಂತರಿಸಿರಿ:—**

१. वह बाज़ार गया। २. आप अदालत आये। ३. निर्मला सात बजे सोयी। ४. हसन कब जागा? ५. वे क्या बोले? ६. आप कहाँ बैठे? ७. तुम कहाँ गयीं? ८. तू कहाँ चला? ९. लड़की हँसी। १० लड़का डाक-घर गया।

**ಹಿಂದುಸ್ತಾನಿಗೆ ಭಾಷಾಂತರಿಸಿರಿ:—**

೧. ಅವರು ಕಾಯಿಪಲ್ಲೆಯನ್ನು ತಂದರು. ೨. ನೀವು ನಿದ್ರಿಸಿದಿರಿ. ೩ ರಾಮನು ಕಚೇರಿಗೆ ಬಂದನು. ೪ ಹುಡುಗೆಯು ಎಲ್ಲಿಗೆ ಹೋದಳು? ೫. ನಾನು ಮಾತನಾಡಿದೆನು. ೬. ನಾವು ಕುಳಿತೆವು. ೭ ತಾವು ಎಲ್ಲಿ ಕುಳಿತಿರಿ? ೮. ರಾಮನು ಪೋಸ್ಟ-ಆಫೀಸಿಗೆ ಹೋದನೊ? ೯. ಅವರು ಹೂವು ತಂದರು. ೧೦. ಜಾನಕಿಯು ಮನೆಗೆ ಬಂದಳು.

## ಪಾಠ ೫.

### ಲಿಂಗಗಳು

ಹಿಂದುಸ್ತಾನೀ ಭಾಷೆಯಲ್ಲಿ ಪುಲ್ಲಿಂಗ ಮತ್ತು ಸ್ತ್ರೀಲಿಂಗಳೆಂದು ಎರಡೇ ಲಿಂಗಗಳಿರುತ್ತವೆ. ಸಜೀವ ಮತ್ತು ನಿರ್ಜೀವ ಪದಾರ್ಥಗಳು ಇವೆರಡೇ ಲಿಂಗಗಳಲ್ಲಿ ವಿಭಾಗಿಸಲ್ಪಟ್ಟಿರುತ್ತವೆ.

ಹಿಂದುಸ್ತಾನೀ ಭಾಷೆಯಲ್ಲಿ ನಪುಂಸಕ ಲಿಂಗವು ಇಲ್ಲ.

ಲಿಂಗಭೇದದ ನಿರ್ಣಯುವನ್ನು ಅಭ್ಯಾಸದಿಂದಲೇ ಹೆಚ್ಚಾಗಿ ಮಾಡಿ ಕೊಳ್ಳಬೇಕಾಗುತ್ತದೆ.

ಕೆಲವು ನಾಮಗಳ ಲಿಂಗವು ರೂಢಿಯಿಂದ ಗೊತ್ತಾಗುತ್ತದೆ.

ನಾಮಗಳ ಹಿಂದಿನ ಮತ್ತು ಮುಂದಿನ ವಿಶೇಷಣಗಳ ಸಹಾಯ ದಿಂದಲೂ ಕ್ರಿಯಾಪದಗಳ ಸಹಾಯದಿಂದಲೂ ಪದಾರ್ಥಗಳ ಲಿಂಗಗಳನ್ನು ಕಂಡು ಹಿಡಿಯಬಹುದು.

### ಪುಲ್ಲಿಂಗ

ಅಕಾರಾಂತ ನಾಮಗಳು ಸಾಮಾನ್ಯವಾಗಿ ಪುಲ್ಲಿಂಗವಾಗಿವೆ.

ಉದಾ:- घर ಮನೆ, काग़ज़ ಕಾಗದ, पेड़ ಮರ, फल ಹಣ್ಣು

ಅಪವಾದಗಳು:- किताब ಪುಸ್ತಕ, क़लम ಲೆಕ್ಕಣಿಕೆ, आँख ಕಣ್ಣು, नाक ಮೂಗು, दीवार ಗೋಡೆ, मेज़ ಮೇಜು

आ ಕಾರಾಂತ ನಾಮಗಳೂ ಸಾಮಾನ್ಯವಾಗಿ ಪುಲ್ಲಿಂಗವಾಗಿವೆ.

ಉದಾ:- कमरा ಕೋಣೆ, कपड़ा ಬಟ್ಟೆ पहिया ಕಾಲು, ಚಕ್ರ; आटा ಹಿಟ್ಟು; ಇತ್ಯಾದಿ.

ಅಪವಾದಗಳು:- हवा ಹವೆ, दुनिया ಜಗತ್ತು, दवा ಔಷಧ, सज़ा ಶಿಕ್ಷೆ.

## ಸ್ತ್ರೀಲಿಂಗ

इ ಕಾರಾಂತ ನಾಮಗಳು ಸ್ತ್ರೀಲಿಂಗವಾಗಿವೆ.

ಉದಾಃ- रुचि ರುಚಿ, अग्नि ಬೆಂಕಿ, मति ಬುದ್ಧಿ, ಇತ್ಯಾದಿ.

ई ಕಾರಾಂತ ನಾಮಗಳೂ ಸ್ತ್ರೀಲಿಂಗವಾಗಿವೆ.

ಉದಾಃ- नदी ನದಿ, रोटी ರೊಟ್ಟಿ, कुर्सी ಕುರ್ಚಿ, टोपी ಟೊಪ್ಪಿಗೆ, ಇತ್ಯಾದಿ.

ಅಪವಾದಗಳು:- पानी ನೀರು, मोती ಮುತ್ತು, घी ತುಪ್ಪ, दही ಮೊಸರು.

त ಕಾರಾಂತ ನಾಮಗಳೂ ಸ್ತ್ರೀಲಿಂಗವಾಗಿರುತ್ತವೆ.

ಉದಾ:- रात ರಾತ್ರಿ, बात ಮಾತು, तबियत ಪ್ರಕೃತಿ, ಆರೋಗ್ಯ ಇತ್ಯಾದಿ.

ಅಪವಾದಗಳು:— खत ಪತ್ರ, भात ಅನ್ನ.

## ಅಭ್ಯಾಸ ೫

| | |
|---|---|
| रस्सा ಹಗ್ಗ | टोकरी ಸಣ್ಣ ಬುಟ್ಟಿ |
| जूता ಕಾಲ್ಮರಿ | चमड़ा ಚರ್ಮ |
| शेर ಸಿಂಹ | बिल्ली ಬೆಕ್ಕು |

मोर ನವಿಲು — बुलबुल ಬುಲ್‌ಬುಲ್ ಪಕ್ಷಿ

नाई ಹಜಾಮ — हजामत ಕ್ಷೌರ

बढ़ई ಬಡಿಗ — हल ರೆಂಟೆ, ನೇಗಿಲು

गाय ಹಸು, ಆಕಳು — बैल ಎತ್ತು

चूहा ಇಲಿ — भैंस ಎಮ್ಮೆ

घास ಹುಲ್ಲು — चरा ಮೇಯಿಸು

**ಕನ್ನಡಕ್ಕೆ ಭಾಷಾಂತರಿಸಿರಿ:—**

१. गाय दूध देती है। २. मोर नाचता है। ३. बिल्ली दूध पियेगी। ४. राम भैंस चराता है। ५ सीता जूता पहनती है। ६. बैल हल खींचते हैं। ७. नाई हजामत बनाता है। ८. मोर कहाँ बैठता है? ९. बुलबुल गीत गाती है। १०. शेर कहाँ गया?

**ಹಿಂದುಸ್ತಾನಿಗೆ ಭಾಷಾಂತರಿಸಿರಿ:—**

೧. ರಾಮನು ಆಕಳನ್ನು ಮೇಯಿಸುತ್ತಾನೆ. ೨. ಎಮ್ಮೆಯು ಹಾಲನ್ನು ಕೊಡುತ್ತದೆ. ೩. ಬೆಕ್ಕು ಇಲಿಯನ್ನು ತಿನ್ನುತ್ತದೆ. ೪. ಸೀತೆಯು ಎಲ್ಲಿಗೆ ಹೋದಳು? ೫. ಅವರು ಯಾವಾಗ ಬಂದರು? ೬. ಬಡಿಗನು ಯಾವಾಗ ಮನೆಗೆ ಬರುವನು? ೭. ಕ್ಷೌರವನ್ನು ಯಾರು ಮಾಡುವರು? ೮. ಚರ್ಮವು ಎಲ್ಲಿರುತ್ತದೆ? ೯. ಬುಟ್ಟಿಯನ್ನು ಇಲ್ಲಿಗೆ ಯಾರು ತರುತ್ತಾರೆ? ೧೦. ಹಗ್ಗವು ಎಲ್ಲಿ ಸಿಗುತ್ತದೆ?

## ಪಾಠ ೬.

### ವಚನಗಳು

ಕನ್ನಡದಲ್ಲಿರುವಂತೆ ಹಿಂದುಸ್ತಾನಿಯಲ್ಲಿಯೂ ಏಕವಚನ ಮತ್ತು ಬಹುವಚನಗಳು ಎಂದು ಎರಡೇ ವಚನಗಳಿರುವವು.

ಪುಲ್ಲಿಂಗ ಆಕಾರಾಂತ ನಾಮಗಳು ಬಹುವಚನದಲ್ಲಿ ಏಕಾರಾಂತ ವಾಗುತ್ತವೆ. ಉಳಿದ ನಾಮಗಳು ಎರಡೂ ವಚನಗಳಲ್ಲಿ ಯಾವ ಮಾರ್ಪಾಟನ್ನೂ ಹೊಂದದೆ ಹಾಗೇ ಉಳಿಯುವವು.

| ಏಕವಚನ | | ಬಹುವಚನ | |
|---|---|---|---|
| लड़का | ಹುಡುಗ | लड़के | ಹುಡುಗರು |
| घोड़ा | ಕುದುರೆ | घोड़े | ಕುದುರೆಗಳು |
| घर | ಮನೆ | घर | ಮನೆಗಳು |
| पत्थर | ಕಲ್ಲು | पत्थर | ಕಲ್ಲುಗಳು |
| डाकू | ದರೋಡೆಗಾರ | डाकू | ದರೋಡೆಗಾರರು |
| भाई | ಸಹೋದರ | भाई | ಸಹೋದರರು |

ಅಕಾರಾಂತ ಸ್ತ್ರೀಲಿಂಗ ಶಬ್ದಗಳು ಬಹುವಚನದಲ್ಲಿ ಏಂಕಾರಾಂತ ವಾಗುತ್ತವೆ.

| ಏಕವಚನ | | ಬಹುವಚನ | |
|---|---|---|---|
| किताब | ಪುಸ್ತಕ | किताबें | ಪುಸ್ತಕಗಳು |
| चीज़ | ವಸ್ತು | चीज़ें | ವಸ್ತುಗಳು |
| आँख | ಕಣ್ಣು | आँखें | ಕಣ್ಣುಗಳು |
| संदूक | ಪೆಟ್ಟಿಗೆ | संदूकें | ಪೆಟ್ಟಿಗೆಗಳು |
| बहन | ಸಹೋದರಿ | बहनें | ಸಹೋದರಿಯರು |
| बात | ಮಾತು | बातें | ಮಾತುಗಳು |

ಇ, ಈಕಾರಾಂತ ಸ್ತ್ರೀಲಿಂಗ ಶಬ್ದಗಳು ಬಹುವಚನದಲ್ಲಿ इयाँ ಆಗುತ್ತವೆ. ಈ ಕಾರಾಂತ ಶಬ್ದದ ಅಂತಿಮ ಅಕ್ಷರವು ಹೃಸ್ವವಾದ ಮೇಲೆ इयाँ ಪ್ರತ್ಯಯವು ಸೇರುತ್ತದೆ.

| ಏಕವಚನ | | ಬಹುವಚನ | |
|---|---|---|---|
| लिपि | ಲಿಪಿ, ಅಕ್ಷರ | लिपियाँ | ಲಿಪಿಗಳು ಅಕ್ಷರಗಳು |
| शक्ति | ಶಕ್ತಿ, ಬಲ | शक्तियाँ | ಶಕ್ತಿಗಳು |
| तिथि | ತಿಥಿ | तिथियाँ | ತಿಥಿಗಳು |
| लड़की | ಹುಡುಗಿ | लड़कियाँ | ಹುಡುಗಿಯರು |
| साड़ी | ಸೀರೆ | साड़ियाँ | ಸೀರೆಗಳು |
| नदी | ನದಿ | नदियाँ | ನದಿಗಳು |

ಉಳಿದ ಸ್ತ್ರೀಲಿಂಗ ಶಬ್ದಗಳ ಅಂತ್ಯಸ್ವರದ ಮುಂದೆ एं ಅಥವಾ यें ಸೇರಿಸುವುದರಿಂದ ಬಹುವಚನವಾಗುತ್ತದೆ.

| ಏಕವಚನ | | ಬಹುವಚನ | |
|---|---|---|---|
| लता | ಬಳ್ಳಿ | लतायें | ಬಳ್ಳಿಗಳು |
| कथा | ಕಥೆ | कथायें | ಕಥೆಗಳು |
| सेना | ಸೈನ್ಯ | सेनायें | ಸೈನ್ಯಗಳು |
| वस्तु | ವಸ್ತು | वस्तुएं | ವಸ್ತುಗಳು |
| यात्रा | ಯಾತ್ರೆ | यात्रायें | ಯಾತ್ರೆಗಳು |
| पाठशाला | ಪಾಠಶಾಲೆ | पाठशालायें | ಪಾಠಶಾಲೆಗಳು |

## ಅಭ್ಯಾಸ ೬.

| | | | |
|---|---|---|---|
| दिन | ಹಗಲು | रातको | ರಾತ್ರಿಗೆ |
| सुबह | ಬೆಳಿಗ್ಗೆ | शामको | ಸಾಯಂಕಾಲಕ್ಕೆ |
| सौदागर | ವ್ಯಾಪಾರಿ | किसान | ಒಕ್ಕಲಿಗ |
| चरखा | ರಾಟೆ | रुई | ಅರಳೆ |
| कात | ನೂಲುತೆಗೆ | सूत | ದಾರ |
| खेत | ಹೊಲ | जोत | ಹೂಡು |
| पहन | ಧರಿಸು | बेच | ಮಾರು |
| गिर | ಬೀಳು | चढ़ | ಏರು |

**ಕನ್ನಡಕ್ಕೆ ಭಾಷಾಂತರಿಸಿರಿ:—**

१. किसान सुबह खेत जाता है। २. सौदागर चीजें बेचता है। ३. लड़की कल सूत कातेगी। ४. लड़के शामको खेलेंगे। ५. आप कहाँ गये? ६. वे सुबह बाज़ार गये। ७. बैल हल जोतते हैं। ८. मैं कपड़ा पहनूंगा। ९. बहनें मिठाइयाँ खायेंगी। १० तुम कल कहाँ सोये?

**ಹಿಂದುಸ್ತಾನಿಗೆ ಭಾಷಾಂತರಿಸಿರಿ:—**

೧. ನಾವು ಬೆಳಿಗ್ಗೆ ಎದ್ದೆವು. ೨. ನೀವು ಹೊಲಕ್ಕೆ ಯಾವಾಗ ಹೋಗುವಿರಿ? ೩. ರಾಧೆಯು ನೂಲು ತೆಗೆಯುವಳು. ೪. ಗೋವಿಂದನು ಏನು ಮಾತಾಡಿದನು? ೫. ನಿನ್ನೆ ರಾತ್ರಿ ನೀವು ಸಿನೇಮಾಕ್ಕೆ ಹೋದಿರೊ? ೬. ಅವರ ಮನೆಯು ಅಲ್ಲಿ ಇದೆ. ೭. ಕುದುರೆಗಳು ಓಡಿದವು. ೮. ಹುಡುಗೆಯರು ಬಂದರು. ೯. ಪುಸ್ತಕಗಳು ಎಲ್ಲಿ ಇವೆ? ೧೦. ವ್ಯಾಪಾರಿಗಳು ಬಟ್ಟೆಗಳನ್ನು ಮಾರುತ್ತಾರೆ.

# ಪಾಠ ೭.

## ಆಜ್ಞಾರ್ಥ

ಕನ್ನಡದಲ್ಲಿರುವಂತೆ ಹಿಂದುಸ್ತಾನಿಯಲ್ಲಿ ಧಾತುವಿನ ಮೂಲ ರೂಪವೇ ವಿಧಿರೂಪವಾಗಿರುತ್ತದೆ. ಇದನ್ನು ಏಕವಚನದಲ್ಲಿ ಉಪಯೋಗಿಸುತ್ತಾರೆ.

ಉದಾ:- तू जा ನೀನು ಹೋಗು, तू पी ನೀನು ಕುಡಿ, तू खेल ನೀನು ಆಡು.

ಧಾತುವಿಗೆ ओ ಸೇರಿಸುವದರಿಂದ ಮಧ್ಯಮ ಪುರುಷ ಬಹುವಚನದ ವಿಧಿರೂಪವಾಗುತ್ತದೆ.

ಉದಾ:- तुम जाओ ನೀವು ಹೋಗಿರಿ. तुम खेलो ನೀವು ಆಡಿರಿ.

ಅಪವಾದಗಳು:- ले ಮತ್ತು दे ಇವು ಅನುಕ್ರಮವಾಗಿ लो ಮತ್ತು दो ರೂಪಗಳನ್ನು ತಾಳುತ್ತವೆ.

ಧಾತುವಿಗೆ इये ಸೇರಿಸುವುದರಿಂದ ಬಹುವಚನ ಗೌರವವಾಚಕದ ವಿಧಿರೂಪವಾಗುತ್ತದೆ.

ಉದಾ:- आप जाइये ತಾವು ಹೋಗಿರಿ, आप खेलिये ತಾವು ಆಡಿರಿ.

ಅಪವಾದಗಳು:- कर, ले, दे, पी ಧಾತುಗಳು ಕೆಳಗೆ ಕಾಣಿಸಿದ ರೂಪಗಳನ್ನು ಹೊಂದುತ್ತವೆ:—

आप कीजिये ತಾವು ಮಾಡಿರಿ.

आप लीजिये ತಾವು ತೆಗೆದುಕೊಳ್ಳಿರಿ.

आप दीजिये ತಾವು ಕೊಡಿರಿ.

आप पीजिये ತಾವು ಕುಡಿಯಿರಿ

# ಅಭ್ಯಾಸ ೭.

| | | | |
|---|---|---|---|
| पेड़ | ಮರ | डाल | ರೆಂಬೆ, ಕೊಂಬೆ, ಟೊಂಗೆ |
| मल | ತಿಕ್ಕು | पत्ता | ಎಲೆ |
| लड़ | ಜಗಳಾಡು, ಕಾದು | चाह | ಬಯಸು, ಇಚ್ಛಿಸು, ಪ್ರೀತಿಸು |
| चाकू | ಚಾಕು | काट | ಕೊಯ್ಯು |
| आम | ಮಾವಿನಹಣ್ಣು | चटाई | ಚಾಪೆ |
| दरी | ಜಮಖಾನೆ | बिछा | ಹಾಸು |
| नहा | ಸ್ನಾನಮಾಡು | धो | ತೊಳೆ |
| अब | ಈಗ | कब | ಯಾವಾಗ |

**मत ಬೇಡ** (ನಿಷೇಧಾರ್ಥ)

**ಕನ್ನಡಕ್ಕೆ ಭಾಷಾಂತರಿಸಿರಿ:—**

१. तू फल ला। २. तुम घर जाओ। ३. आप कचहरी जाइये। ४. हुसेन तू मसज़िद जा। ५. राम तू सवेरे नहा। ६. वह आम काटती है। ७. राधा दरी बिछाती है। ८. आप काम कीजिये। ९. तुम चाकू दो। १०. तुम मत लड़ो।

**ಹಿಂದುಸ್ತಾನಿಗೆ ಭಾಷಾಂತರಿಸಿರಿ: —**

೧. ನೀನು ಹಣ್ಣನ್ನು ತಿನ್ನು. ೨. ನೀವು ಮರವನ್ನು ಕಡಿಯಿರಿ. ೩. ತಾವು ಪುಸ್ತಕಗಳನ್ನು ಓದಿರಿ. ೪. ಅವರು ಬಟ್ಟೆಗಳನ್ನು ಒಗೆಯುವರು. ೫. ತಾವು ಹೂವನ್ನು ತೆಗೆದುಕೊಳ್ಳಿರಿ. ೬. ನೀವು ಊಟ ಮಾಡಿರಿ. ೭. ಅವರು ಇಲ್ಲಿಗೆ ಬಂದರು. ೮. ತಾವು ನಾಟಕ ನೋಡಿರಿ. ೯. ನೀನು ಹಾಲು ಕುಡಿ. ೧೦. ನೀವು ಎಲೆಗಳನ್ನು ಕೊಡಿರಿ.

# ಪಾಠ ೮.

## ವಿಶೇಷಣಗಳು

ಸಾಮಾನ್ಯವಾಗಿ ವಿಶೇಷಣಗಳು ತಮ್ಮ ವಿಶೇಷ್ಯಗಳ ಹಿಂದೆಯೇ ಬರುತ್ತವೆ.

ಉದಾ:- लाल फूल ಕೆಂಪು ಹೂವು, नरम रोटी ಮೃದುವಾದ ರೊಟ್ಟಿ, खूबसूरत लड़के ಸುಂದರ ಹುಡುಗರು, कीमती आइना ಬೆಲೆಯುಳ್ಳ ಕನ್ನಡಿ.

ಆಕಾರಾಂತ ವಿಶೇಷಣಗಳು ತಮ್ಮ ವಿಶೇಷ್ಯಗಳ ಲಿಂಗವಚನಗಳಂತೆ ಮಾರ್ಪಾಟವಾಗುತ್ತವೆ. ಎಂದರೆ ಪು. ಏಕವಚನದಲ್ಲಿ ಆಕಾರಾಂತ, ಬಹುವಚನದಲ್ಲಿ ಏಕಾರಾಂತ, ಸ್ತ್ರೀಲಿಂಗ ಏಕವಚನ ಬಹುವಚನದಲ್ಲಿ ಈಕಾರಾಂತವಾಗುತ್ತವೆ.

ಉದಾ:— अच्छा लड़का ಒಳ್ಳೆಯ ಹುಡುಗ, अच्छे लड़के ಒಳ್ಳೆಯ ಹುಡುಗರು, अच्छी लड़की ಒಳ್ಳೆಯ ಹುಡುಗಿ, अच्छी लड़कियाँ ಒಳ್ಳೆಯ ಹುಡುಗೆಯರು.

| | | | |
|---|---|---|---|
| मोटा | ದಪ್ಪವಾದ | पतला | ತೆಳುವಾದ |
| मीठा | ಸಿಹಿಯಾದ | कड़आ | ಕಹಿಯಾದ |
| छोटा | ಸಣ್ಣ | बड़ा | ದೊಡ್ಡ |
| ख़राब / बुरा | ಕೆಟ್ಟ | उमदा | ಒಳ್ಳೆಯ |

| | | | |
|---|---|---|---|
| काला | ಕರಿಯ | नीला | ನೀಲವಾದ |
| हरा | ಹಸರು | पीला | ಹಳದಿ |
| लंबा | ಉದ್ದವಾದ | कच्चा | ಮಾಗದ |
| करैला | ಹಾಗಲಕಾಯಿ | केला | ಬಾಳೆ |
| साफ़ | ಸ್ವಚ್ಛ | लाल | ಕೆಂಪು |

## ಅಭ್ಯಾಸ ೮.

**ಕನ್ನಡಕ್ಕೆ ಭಾಷಾಂತರಿಸಿರಿ:—**

१. यह आम मीठा है। २. करैले कड़ुअे हैं। ३. वह मोटा कपड़ा दूकानमें ख़रीदता है। ४. कच्चे केले हरे होते हैं। ५. वह छोटा आदमी कहाँ जाता है? ६. बुरे लड़के पाठशाला नहीं जाते हैं। ७. वह औरत बहुत पतली है। ८. दवातमें काली स्याही है। ९. तुम नीले आकाशमें क्या देखते हो? १०. वे बहुत ख़राब आदमी हैं।

**ಹಿಂದುಸ್ತಾನಿಗೆ ಭಾಷಾಂತರಿಸಿರಿ.:—**

೧. ನಿಮ್ಮ ಊರಲ್ಲಿ ಸುಂದರವಾದ ಮನೆಯು ಎಲ್ಲಿ ಇದೆ? ೨. ಅಹಮದನು ಒಳ್ಳೆಯ ಹಿಂದುಸ್ತಾನಿಯನ್ನು ಬರೆಯುತ್ತಾನೆ. ೩. ಹಿಂದುಸ್ತಾನದಲ್ಲಿ ದೊಡ್ಡ ದೊಡ್ಡ ಪಟ್ಟಣಗಳಿವೆ ೪ ರಾಮನ ಮನೆಯ ಬೆಕ್ಕು ಕಪ್ಪು ಇದೆ. ೫. ಗಿಡದ ಎಲೆಗಳು ಹಸರಾಗಿರುತ್ತವೆ.

೬. ರಾಮನ ಬಟ್ಟೆಯು ತೆಳ್ಳಗಿದೆ. ೭. ಅವನು ಸಿಹಿಯಾದ ಹಣ್ಣುಗಳನ್ನು ಮಾರುತ್ತಾನೆ. ೮. ರಹೀಮನು ಬಹಳ ಉದ್ದವಾದ ಮನುಷ್ಯನು ಇದ್ದಾನೆ. ೯. ಇದು ದಪ್ಪವಾದ ಕಾಗದವು ಇರುತ್ತದೆ. ೧೦. ಸೀತೆಯು ಸ್ವಚ್ಛವಾದ ಅರಿವೆಗಳನ್ನು ಧರಿಸುತ್ತಾಳೆ.

## ಪಾಠ ೯.

### ಕ್ರಿಯಾ ವಿಶೇಷಣಗಳು.

ಕನ್ನಡದಲ್ಲಿರುವಂತೆ ಹಿಂದುಸ್ತಾನಿಯಲ್ಲಿಯೂ ಕ್ರಿಯಾವಿಶೇಷಣಗಳು ಕರ್ತೃವಿನ ಮುಂದೆ ಮತ್ತು ಕ್ರಿಯಾಪದದ ಹಿಂದೆ ಉಪಯೋಗಿಸಲ್ಪಡುತ್ತವೆ.

ಉದಾ:—मैं रोज़ पाठशाला जाता हूँ ನಾನು ಪ್ರತಿ ದಿವಸ ಶಾಲೆಗೆ ಹೋಗುತ್ತೇನೆ

## ಅಭ್ಯಾಸ ೯.

| | | | |
|---|---|---|---|
| जल | ನೀರು | सिर्फ़ | ಕೇವಲ |
| थोड़ा | ಸ್ವಲ್ಪ | ज्यादह | ಹೆಚ್ಚು |
| अकसर | ಆಗಾಗ್ಗೆ, ಪದೇಪದೇ, ಮೇಲಿಂದ ಮೇಲೆ | कभी कभी | ಒಮ್ಮೊಮ್ಮೆ |
| काफ़ी | ಸಾಕಷ್ಟು | कुछ | ಕೆಲವು |
| धीरेधीरे | ಸಾವಕಾಶವಾಗಿ | आजकल | ಇತ್ತೀಚಿಗೆ |
| तेज़ | ತೀವ್ರವಾಗಿ | मिसाल | ಉದಾಹರಣೆ |
| ख़बर | ಸುದ್ದಿ | अख़बार | ವರ್ತಮಾನ ಪತ್ರ |

| | | | |
|---|---|---|---|
| दुश्मन | ವೈರಿ | दोस्त | ಮಿತ್ರ |
| जान | ತಿಳಿ | समझ | ಅರ್ಥಮಾಡಿಕೊ |
| हिरन | ಚಿಗರೆ, ಜಿಂಕೆ | दौड़ | ಓಡು |

**ಕನ್ನಡಕ್ಕೆ ಭಾಷಾಂತರಿಸಿರಿ:—**

१. आजलक अख़बारमें अच्छी अच्छी खबरें छपती हैं। २. वह घर अकसर आता है। ३. कुछ दिनसे तबियत ख़राब है। ४. वे कल बेंगलूर जायेंगे। ५. यह घड़ी अच्छी है। ६. मैं अच्छी तरह जानता हूँ। ७. वह रोज़ काफ़ी दूध पीता है। ८. घोड़े हमेशा तेज़ दौडते हैं। ९. मैं कभी कभी सिनीमा देखता हूँ। १०. अहमदके पास सिर्फ़ दो कपड़े हैं।

**ಹಿಂದುಸ್ತಾನಿಗೆ ಭಾಷಾಂತರಿಸಿರಿ.:—**

೧. ಸಹೋದರಿಯು ಹಿಂದುಸ್ತಾನಿಯನ್ನು ತಿಳಿದುಕೊಳ್ಳುತ್ತಾಳೊ? ೨. ಶಿವಾಜಿಯು ಔರಂಗಜೇಬನ ವೈರಿಯು. ೩. ಗಾಂಧಿಜಿಯವರು ಬ್ರಿಟನ್ನಿನ ಮಿತ್ರರು. ೪. ಹಿಂದೂ ಮುಸಲ್ಮಾನರಲ್ಲಿ ಸಾಕಷ್ಟು ಗೆಳೆತನವಿದೆ. ೫. ನಾಳೆ ಸಾಯಂಕಾಲ ನಾವು ಖಾದಿಯನ್ನು ಕೊಂಡುಕೊಳ್ಳುವೆವು. ೬. ಅವರು ಯಾವಾಗಲೂ ಸುಳ್ಳು ಮಾತಾಡುತ್ತಾರೆ. ೭. ಜಾನಕಿಯು ಮೆಲ್ಲಗೆ ಓಡುತ್ತಾಳೆ. ೮. ನಾಳೆ ಅವರು ಎಲ್ಲಿಗೆ ಹೋಗುವರು? ೯. ಜಿಂಕೆಗಳು ವೇಗವಾಗಿ ಓಡುತ್ತವೆ. ೧೦. ಇತ್ತೀಚಿಗೆ ಅನೇಕ ಜನರು ವರ್ತಮಾನಪತ್ರಗಳನ್ನು ಓದುತ್ತಾರೆ.

# ಪಾಠ ೧೦.

## ವಿಭಕ್ತಿ ಪ್ರತ್ಯಯಗಳು.

ಕನ್ನಡದಲ್ಲಿರುವಂತೆ ಹಿಂದುಸ್ತಾನಿಯಲ್ಲಿಯೂ ಎಂಟು ವಿಭಕ್ತಿ ಪ್ರತ್ಯಯಗಳಿರುತ್ತವೆ.

| ವಿಭಕ್ತಿಗಳು | ಪ್ರತ್ಯಯಗಳು |
|---|---|
| ಪ್ರಥಮಾ-ಕರ್ತೃ | —, ने ಉ |
| ದ್ವಿತೀಯಾ-ಕರ್ಮ | को ಅನ್ನು |
| ತೃತೀಯಾ-ಕರಣ | से ಇಂದ |
| ಚತುರ್ಥಿ-ಸಂಪ್ರದಾನ | को, के लिये, के वास्ते<br>ಇಗೆ, ಅಕ್ಕೆ, ಓಸ್ಕರ. |
| ಪಂಚಮಿ-ಅಪಾದಾನ | से ಇಂದ |
| ಷಷ್ಠಿ-ಸಂಬಂಧ | का, के, की ಅ<br>(ನ, ಳ, ದ, ರ, ಯ) |
| ಸಪ್ತಮಿ-ಅಧಿಕರಣ | में, पर ಅಲ್ಲಿ, ಒಳಗೆ, ಮೇಲೆ |
| ಅಷ್ಟಮಿ-ಸಂಬೋಧನ | हे, अजी, अरे ಏ |

### बालक ಹುಡುಗ

ಏಕವಚನ

१. बालक, बालक ने ಬಾಲಕನು

२. बालक को ಬಾಲಕನನ್ನು

३. बालक से ಬಾಲಕನಿಂದ

४. बालक को, बालक के लिए, बालक के वास्ते ಬಾಲಕನಿಗೆ

५. बालक से ಬಾಲಕನಿಂದ

६. बालक का, बालक के, बालक की ಬಾಲಕನ

७. बालक में, बालक पर ಬಾಲಕನಲ್ಲಿ, ಬಾಲಕನ ಮೇಲೆ

८. हे बालक ಬಾಲಕನೇ

ಆಕಾರಾಂತ ನಾಮಗಳಿಗೆ ವಿಭಕ್ತಿ ಪ್ರತ್ಯಯಗಳು ಪರವಾದಾಗ ಅವು ಏಕವಚನದಲ್ಲಿ ಏಕಾರಾಂತವಾಗುತ್ತವೆ.

१. लड़का, लड़के ने ಹುಡುಗನು

२. लड़के को ಹುಡುಗನನ್ನು

३. लड़के से ಹುಡುಗನಿಂದ

४. लड़के को<br>लड़के के लिये<br>लड़के के वास्ते } ಹುಡುಗನಿಗೆ, ಹುಡುಗನಿಗಾಗಿ

५. लड़के से ಹುಡುಗನಿಂದ

६. लड़के का<br>लड़के के<br>लड़के की } ಹುಡುಗನ

७. लड़के में<br>लड़के पर } ಹುಡುಗನಲ್ಲಿ, ಹುಡುಗನ ಮೇಲೆ

ಪುಲ್ಲಿಂಗ ಮತ್ತು ಸ್ತ್ರೀಲಿಂಗ ನಾಮಪದಗಳ ಮುಂದೆ ಬಹುವಚನದಲ್ಲಿ ವಿಭಕ್ತಿಪ್ರತ್ಯಯಗಳು ಪರವಾದಾಗ ओं ಬರುತ್ತದೆ.

**बालक ಹುಡುಗ**

ಬಹುವಚನ

१. बालक, बालकोंने ಬಾಲಕರು
२. बालकों को ಬಾಲಕರನ್ನು
३. बालकों से ಬಾಲಕರಿಂದ
४. बालकों को / बालकों के लिए / बालकों के वास्ते — ಬಾಲಕರಿಗೆ, ಬಾಲಕರಿಗಾಗಿ
५. बालकों से ಬಾಲಕರಿಂದ
६. बालकों का / बालकों के / बालकों की — ಬಾಲಕರ
७. बालकों में / बालकों पर — ಬಾಲಕರಲ್ಲಿ, ಬಾಲಕರ ಮೇಲೆ

**लड़का ಹುಡುಗ**

ಬಹುವಚನ

१. लड़कों ने ಹುಡುಗರು
२. लड़कों को ಹುಡುಗರನ್ನು

३. लड़कों से — ಹುಡುಗರಿಂದ

४. लड़कों को
लड़कों के लिए
लड़कों के वास्ते — ಹುಡುಗರಿಗೆ, ಹುಡುಗರಿಗಾಗಿ

५. लड़कों से — ಹುಡುಗರಿಂದ

६. लड़कों का
लड़कों के
लड़कों की — ಹುಡುಗರ

७. लड़कों में
लड़कों पर — ಹುಡುಗರಲ್ಲಿ, ಹುಡುಗರ ಮೇಲೆ

## वस्तु ವಸ್ತು

### ಬಹುವಚನ

१. वस्तुओंने ವಸ್ತುಗಳು

२. वस्तुओंको ವಸ್ತುಗಳನ್ನು

३. वस्तुओंसे ವಸ್ತುಗಳಿಂದ

४. बस्तुओंको
वस्तुओंके लिए
बस्तुओंके वास्ते — ವಸ್ತುಗಳಿಗೆ, ವಸ್ತುಗಳಿಗಾಗಿ

५. वस्तुओंसे ವಸ್ತುಗಳಿಂದ

६. वस्तुओंका,
वस्तुओंके
वस्तुओंकी — ವಸ್ತುಗಳ

| | |
|---|---|
| ७. वस्तुओंमें, वस्तुओंपर | ವಸ್ತುಗಳಲ್ಲಿ, ವಸ್ತುಗಳ ಮೇಲೆ |

**बहू ಸೊಸೆ**

ಬಹುವಚನ

| | |
|---|---|
| १. बहुओंने | ಸೊಸೆಯರು |
| २. बहुओंको | ಸೊಸೆಯರನ್ನು |
| ३. बहुओंसे | ಸೊಸೆಯರಿಂದ |
| ४. बहुओंको, बहुओंके लिए, बहुओंके वास्ते | ಸೊಸೆಯರಿಗೆ, ಸೊಸೆಯರಿಗಾಗಿ |
| ५. बहुओंसे | ಸೊಸೆಯರಿಂದ |
| ६. बहुओंका, बहुओंके, बहुओंकी | ಸೊಸೆಯರ |
| ७. बहुओंमें, बहुओंपर | ಸೊಸೆಯರಲ್ಲಿ, ಸೊಸೆಯರ ಮೇಲೆ |

इ, ई ಕಾರಾಂತ ನಾಮಪದಗಳಿಗೆ ಬಹುವಚನದಲ್ಲಿ ವಿಭಕ್ತಿ ಪ್ರತ್ಯಯಗಳು ಪರವಾದಾಗ ओं ದ ಬದಲಾಗಿ यों ಸೇರಿಸಬೇಕು.

**तिथि ತಿಥಿ**

ಬಹುವಚನ

१. तिथियोंने ತಿಥಿಗಳು

२. तिथियोंको ತಿಥಿಗಳನ್ನು

३. तिथियोंसे ತಿಥಿಗಳಿಂದ

४. तिथियोंको
तिथियोंके लिए
तिथियों के वास्ते } ತಿಥಿಗಳಿಗೆ, ತಿಥಿಗಳಿಗಾಗಿ

५. तिथियोंसे ತಿಥಿಗಳಿಂದ

६. तिथियोंका,
तिथियोंके
तिथियोंकी } ತಿಥಿಗಳ

७. तिथियोंमें
तिथियोंपर } ತಿಥಿಗಳಲ್ಲಿ, ತಿಥಿಗಳ ಮೇಲೆ

## नदी ನದಿ

### ಬಹುವಚನ

१. नदियोंने ನದಿಗಳು

२. नदियोंको ನದಿಗಳನ್ನು

३. नदियोंसे ನದಿಗಳಿಂದ

४. नदियोंको,
नदियोंके लिए,
नदियों के वास्ते } ನದಿಗಳಿಗೆ, ನದಿಗಳಿಗಾಗಿ

५. नदियोंसे ನದಿಗಳಿಂದ

६. नदियोंका
नदियोंके
नदियोंकी } ನದಿಗಳ

| | |
|---|---|
| ७. नदियोंमें<br>नदियोंपर | ನದಿಗಳಲ್ಲಿ, ನದಿಗಳ ಮೇಲೆ |

ದ್ವಿತಿಯಾ ವಿಭಕ್ತಿ ಪ್ರತ್ಯಯವನ್ನು ವಿಶೇಷವಾಗಿ ಅಪ್ರಾಣಿವಾಚಕ ನಾಮಗಳಿಗೆ ಸೇರಿಸುವುದಿಲ್ಲ.

ಉದಾ:- मैं फल खाता हूँ ನಾನು ಹಣ್ಣನ್ನು ತಿನ್ನುತ್ತೇನೆ.

वह काम करता है ಅವನು ಕೆಲಸವನ್ನು ಮಾಡುತ್ತಾನೆ.

राम धारवाड़ जाता है ರಾಮನು ಧಾರವಾಡಕ್ಕೆ ಹೋಗುತ್ತಾನೆ.

## ಅಭ್ಯಾಸ ೧೦.

| | | | |
|---|---|---|---|
| प्रदर्शिनी, नुमाइश | ಪ್ರದರ್ಶನ | हवाई-जहाज़ | ವಿಮಾನ |
| मज़दूर | ಕೂಲಿಕಾರ | सभा | ಸಭೆ |
| तरकीब | ಉಪಾಯ | कुर्बानी | ಯಜ್ಞ, ಬಲಿದಾನ |
| इजाज़त, आज्ञा | ಆಜ್ಞೆ | तरक्की | ಉನ್ನತಿ |
| जगह | ಸ್ಥಾನ | दुनिया | ಜಗತ್ತು |
| डाली | ರೆಂಬೆ, ಟೊಂಗೆ | दीवार | ಗೋಡೆ |
| चिड़िया | ಹಕ್ಕಿ | टांग | ತೂಗುಹಾಕು |
| बता | ಹೇಳು, ತೋರಿಸು | पा | ಹೊಂದು |

**ಕನ್ನಡಕ್ಕೆ ಭಾಷಾಂತರಿಸಿರಿ:—**

१. राम नुमाइश से घर आया। २. महादेव बाज़ारसे फल लाया। ३. मैं रामको ऐक तरकीब बताऊंगा। ४. आप रहीमके लिए यह काम करते हैं। ५. दुनिया में बुरे लोग कौन हैं?

६. देशके लिए कुर्बानी कीजिये। ७. मज़दूर मिल में काम करते हैं। ८. राम गोविंद के वास्ते हवाई-जहाज़ खरीदता है। ९. दीवार पर तस्वीर टांगो। १०. वह किताब लेता है।

**ಹಿಂದುಸ್ತಾನಿಗೆ ಭಾಷಾಂತರಿಸಿರಿ:—**

೧. ಅವನು ರಾಮನಿಗೆ ಒಂದು ಪುಸ್ತಕವನ್ನು ಕೊಡುತ್ತಾನೆ. ೨. ಸೀತೆಯು ತಂಗಿಗಾಗಿ ಏನು ಮಾಡುವಳು? ೩. ಹುಡುಗಿಯರು ಬಯಲಿನಲ್ಲಿ ಆಟವಾಡುತ್ತಾರೆ. ೪. ಮನೆಯ ಮೇಲೆ ಒಂದು ಹಕ್ಕಿಯು ಕೂತಿತು. ೫. ಪೆಟ್ಟಿಗೆಯಲ್ಲಿ ಬಹಳ ರೂಪಾಯಿಗಳು ಇವೆ. ೬. ನೀವು ಪಾಠಶಾಲೆಗಾಗಿ ಈ ಕೆಲಸವನ್ನು ಮಾಡುವಿರಾ? ೭. ಅವನು ಬೆಂಗಳೂರಿನಲ್ಲಿ ಇರುತ್ತಾನೆ. ೮. ಗೋವಿಂದನು ಒಳ್ಳೆಯ ಪುಸ್ತಕವನ್ನು ಓದುವನು. ೯. ಧಾರವಾಡದಲ್ಲಿ ಸಭೆಗಳು ಬಹಳ ಆಗುತ್ತವೆ. ೧೦. ಗೋಡೆಯ ಮೇಲಿಂದ ಚಿತ್ರವು ಬಿತ್ತು.

## ಪಾಠ ೧೧.

## का, के, की ನಿಯಮ

ಷಷ್ಠೀ ವಿಭಕ್ತಿ ಪ್ರತ್ಯಯವು ಅದರ ಮುಂದಿರುವ ನಾಮಪದದ ಲಿಂಗ ವಚನಗಳಿಗನುಸಾರವಾಗಿ ಮಾರ್ಪಡುತ್ತದೆ.

ಮುಂದಿರುವ ನಾಮಪದವು ಪುಲ್ಲಿಂಗ ಏಕವಚನ ಇದ್ದರೆ का ಉಪಯೋಗಿಸುತ್ತಾರೆ.

ಉದಾ:- रामका लड़का ರಾಮನ ಹುಡುಗನು.

ಮುಂದಿರುವ ನಾಮಪದವು ಪುಲ್ಲಿಂಗ ಬಹುವಚನವಿದ್ದರೆ ಅಥವಾ ಮುಂದಿರುವ ನಾಮಪದಕ್ಕೆ ವಿಭಕ್ತಿಪ್ರತ್ಯಯವು ಸೇರಿದ್ದರೆ के ಉಪಯೋಗಿಸುತ್ತಾರೆ

ಉದಾ:- रामके लड़के ರಾಮನ ಹುಡುಗರು

रामके घरमें ರಾಮನ ಮನೆಯಲ್ಲಿ

ಮುಂದಿರುವ ನಾಮಪದವು ಸ್ತ್ರೀಲಿಂಗ ಏಕವಚನ ಅಥವಾ ಬಹು ವಚನವಿದ್ದರೆ की ಉಪಯೋಗಿಸುತ್ತಾರೆ.

ಉದಾ:- राम की लड़की ರಾಮನ ಹುಡುಗಿ

राम की पुस्तकें ರಾಮನ ಪುಸ್ತಕಗಳು

राम की लड़कीमें ರಾಮನ ಹುಡುಗಿಯಲ್ಲಿ

## ಅಭ್ಯಾಸ ೧೧.

| | | | |
|---|---|---|---|
| सूबा | ಪ್ರಾಂತ | गांव | ಹಳ್ಳಿ |
| मील | ಮೈಲು | दूर | ದೂರ |
| रिश्तेदार | ಸಂಬಂಧಿಕ, ಆಪ್ತ | जायदाद | ಆಸ್ತಿ, ಸಂಪತ್ತು |
| इमारत | ಕಟ್ಟಡ, ಬಂಗಲೆ | पैरगाड़ी | ಬೈಸಿಕಲ್ |
| बादल | ಮೋಡ | दावत | ಔತಣ |
| चावल | ಅಕ್ಕಿ | आटा | ಹಿಟ್ಟು |
| बेच | ಮಾರು | पीस | ಬೀಸು |
| टूट | ಮುರಿದುಹೋಗು | बिक | ಮಾರಿಹೋಗು |

**ಕನ್ನಡಕ್ಕೆ ಭಾಷಾಂತರಿಸಿರಿ:—**

१. कर्नाटक सूबे में बहुत गाँव हैं। २. गोपालका रिश्तेदार चावल बेचता है। ३. रामके गाँव में एक पैरगाड़ी है।

४. सीता आटेसे रोटी बनाती है। ५. आज राधाके यहाँ एक दावत है। ६. वसंत के पिता की इमारत अच्छी है। ७. धारवाडके बाज़ार में चावल बिकता है। ८. गोपालकी माँ चावल पीसती है। ९. वामन की पैरगाड़ी टूटती है। १०. अनंत की इमारत में बहुत लोग रहते हैं।

**ಹಿಂದುಸ್ತಾನಿಗೆ ಭಾಷಾಂತರಿಸಿರಿ.:—**

೧. ಶ್ರೀಕಾಂತನ ಸಂಭಂಧಿಕರು ಎಲ್ಲಿ ಇರುತ್ತಾರೆ? ೨. ಹಳ್ಳಿಯಲ್ಲಿ ದೊಡ್ಡ ದೊಡ್ಡ ಇಮಾರತುಗಳು ಇರುವದಿಲ್ಲ. ೩. ಸೀತೆಯ ಸಹೋದರಿಯು ಅಕ್ಕಿಯ ರೊಟ್ಟಿಯನ್ನು ಮಾಡುತ್ತಾಳೆ. ೪. ಧಾರವಾಡದಲ್ಲಿ ಹುಡುಗಿಯರು ಸೈಕಲ್ ಹತ್ತುತ್ತಾರೆ. ೫ ರಾಮನ ತಂದೆಯ ಆಸ್ತಿಯು ಹಳ್ಳಿಯಲ್ಲಿದೆ. ೬. ಬೆಂಗಳೂರು ಇಲ್ಲಿಂದ ಬಹಳ ದೂರ ಇದೆ. ೭. ರಾಮನ ಮನೆಯಿಂದ ಸ್ಟೇಶನು ಎಷ್ಟು ದೂರ ಇದೆ? ೮. ಪೇಟಿಯಲ್ಲಿ ಅಕ್ಕಿಯು ಮಾರಿ ಹೋಗುತ್ತದೆ. ೯. ಕೃಷ್ಣನ ಬೈಸಿಕಲ್ ಮುರಿದುಹೊಯಿತು. ೧೦. ರಾಧೆಯ ಪುಸ್ತಕಗಳಲ್ಲಿ ಬಹಳ ಒಳ್ಳೆಯ ಚಿತ್ರಗಳಿರುತ್ತವೆ.

## ಪಾಠ ೧೨.

### ತಾತ್ಕಾಲಿಕ ವರ್ತಮಾನಕಾಲ

ಧಾತುಗಳಿಗೆ ಪುಲ್ಲಿಂಗ ಏಕವಚನದಲ್ಲಿ रहा, ಬಹುವಚನದಲ್ಲಿ रहे ಮತ್ತು ಸ್ತ್ರೀಲಿಂಗ ಏಕವಚನ, ಬಹುವಚನದಲ್ಲಿ रही ಸೇರಿಸಿ हो ಧಾತುವಿನ ವರ್ತಮಾನಕಾಲದ ರೂಪಗಳನ್ನು ಜೋಡಿಸುವುದರಿಂದ ತಾತ್ಕಾಲಿಕ ವರ್ತಮಾನಕಾಲವಾಗುತ್ತದೆ.

## देख ನೋಡು

### ಕರ್ತೃ-ಪುಲ್ಲಿಂಗ

| ಏಕವಚನ | ಬಹುವಚನ |
| --- | --- |
| मैं देख रहा हूँ<br>ನಾನು ನೋಡುತ್ತಿರುತ್ತೇನೆ. | हम देख रहे हैं<br>ನಾವು ನೋಡುತ್ತಿರುತ್ತೇವೆ. |
| तू देख रहा है<br>ನೀನು ನೋಡುತ್ತಿರುತ್ತೀ. | तुम देख रहे हो<br>ನೀವು ನೋಡುತ್ತಿರುತ್ತೀರಿ. |
| वह देख रहा है<br>ಅವನು ನೋಡುತ್ತಿರುತ್ತಾನೆ.<br>ಅದು ನೋಡುತ್ತಿರುತ್ತದೆ. | वे देख रहे हैं<br>ಅವರು ನೋಡುತ್ತಿರುತ್ತಾರೆ.<br>ಅವು ನೋಡುತ್ತಿರುತ್ತವೆ. |

### ಕರ್ತೃ-ಸ್ತ್ರೀಲಿಂಗ

| ಏಕವಚನ | ಬಹುವಚನ |
| --- | --- |
| मैं देख रहा हूँ<br>ನಾನು ನೋಡುತ್ತಿರುತ್ತೇನೆ. | हम देख रही हैं<br>ನಾವು ನೋಡುತ್ತಿರುತ್ತೇವೆ. |
| तू देख रही है<br>ನೀನು ನೋಡುತ್ತಿರುತ್ತೀ. | तुम देख रही हो<br>ನೀವು ನೋಡುತ್ತಿರುತ್ತೀರಿ.<br>आप देख रही हैं<br>ತಾವು ನೋಡುತ್ತಿರುತ್ತೀರಿ. |
| वह देख रही है<br>ಅವಳು ನೋಡುತ್ತಿರುತ್ತಾಳೆ. | वे देख रही हैं<br>ಅವರು ನೋಡುತ್ತಿರುತ್ತಾರೆ. |

# ಅಭ್ಯಾಸ ೧೨.

| | | | |
|---|---|---|---|
| चल | ನಡೆ. | दिखा | ತೋರಿಸು |
| घूम | ತಿರುಗು | लेट | ಅಡ್ಡಾಗು, ಒರಗು |
| सुला | ಮಲಗಿಸು | जगा | ಎಚ್ಚರಿಸು |
| सी | ಹೊಲಿ | सुलगा | ಹೊತ್ತಿಸು |
| लकड़ी | ಕಟ್ಟಿಗೆ | नाव | ದೋಣಿ |
| बच्चा | ಮಗು | गली | ಓಣಿ |
| आग | ಬೆಂಕಿ | बगीचा | ತೋಟ |
| खत | ಪತ್ರ | बातचीत | ಸಂಭಾಷಣೆ |

**ಕನ್ನಡಕ್ಕೆ ಭಾಷಾಂತರಿಸಿರಿ:-**

१. राधाभाई खत लिख रही है। २. मां बच्चे को सुला रही है। ३. वे कपड़े सी रहे हैं। ४. वह गली गली घूम रहा है। ५. तुम आग क्यों सुलगा रही हो? ६. तू लकड़ी से क्या बना रहा है। ७. आप राम से क्या बातचीत कर रहे हैं? ८. लड़कियां किताबें पढ़ रही हैं। ९. तुम बगीचेमें क्यों घूम रहे हो? १०. पक्षी सबको जगा रहे हैं।

**ಹಿಂದುಸ್ತಾನಿಗೆ ಭಾಷಾಂತರಿಸಿರಿ:—**

೧. ರಾಮನ ಮಗನು ಎಲ್ಲಿ ಅಡ್ಡಾಡುತ್ತಿರುತ್ತಾನೆ? ೨. ನೀವು ಯಾವಾಗಲೂ ಪತ್ರವನ್ನು ಬರೆಯುತ್ತಿರುತ್ತೀರಿ. ೩. ನಾವು ನಾಟಕವನ್ನು ನೋಡುತ್ತಿರುತ್ತೇವೆ. ೪. ಸೀತೆಯು ಬೆಂಕಿಯನ್ನು ಹೊತ್ತಿಸುತ್ತಿ

ರುತ್ತಾಳೆ. ೫. ಹುಡುಗೆಯು ಬಟ್ಟೆಯನ್ನು ಹೊಲಿಯುತ್ತಿರುತ್ತಾಳೆ. ೬. ಅವರು ನಡೆಯುತ್ತಿರುತ್ತಾರೆ. ೭. ಸಾಲೆಯಲ್ಲಿ ಹುಡುಗರು ಓದುತ್ತಿರುತ್ತಾರೆ. ೮. ನಾನು ಚಾಪೆಯ ಮೇಲೆ ಆಡ್ಡಾಗುತ್ತಿರುತ್ತೇನೆ. ೯. ತಾವು ಗೋಪಾಳನನ್ನು ಏಕೆ ಎಬ್ಬಿಸುತ್ತಿರುತ್ತೀರಿ ? ೧೦. ಮಗುವು ಮಾತಾಡುತ್ತಿರುತ್ತದೆ.

## ಪಾಠ ೧೩.

### ಸಂಭಾವ್ಯ ಭವಿಷ್ಯತ್ಕಾಲ

ಅ ಕಾರಂತ ಧಾತುಗಳಿಗೆ ಕೆಳಗೆ ಕಾಣಿಸಿದ ಪ್ರತ್ಯಯಗಳನ್ನು ಸೇರಿಸುವುದರಿಂದ ಸಂಭಾವ್ಯ ಭವಿಷ್ಯತ್ಕಾಲವಾಗುತ್ತದೆ. ಇದಕ್ಕೆ ವಿಧ್ಯರ್ಥವೆಂದೂ ಎನ್ನುತಾರೆ.

| | ಏಕವಚನ | ಬಹುವಚನ |
|---|---|---|
| ಉ. ಪು. | ऊँ | एं |
| ಮ. ಪು. | ए | ओ |
| ಪ್ರ. ಪು. | ए | एं |

### उठ ಏಳು

| ಏಕವಚನ | | ಬಹುವಚನ | |
|---|---|---|---|
| मैं उठूं | ನಾನು ಏಳುವೆ. | हम उठें | ನಾವು ಏಳುವಾ |
| तू उठे | ನೀನು ಏಳು. | तुम उठो | ನೀವು ಏಳಿರಿ |
| | | आप उठें | ತಾವು ಏಳಿರಿ. |
| वह उठे | ಅವನು / ಅವಳು / ಅದು ಏಳಲಿ. | वे उठें | ಅವರು / ಅವು ಏಳಲಿ. |

ಅಕಾರಾಂತವನ್ನು ಬಿಟ್ಟು, ಉಳಿದ ಧಾತುಗಳಿಗೆ ऊँ ಮತ್ತು ओ ಪ್ರತ್ಯಯಗಳನ್ನುಳಿದು ವಿಕಲ್ಪವಾಗಿ वकारಾದೇಶವಾಗುತ್ತದೆ.

**जा ಹೋಗು**

| ಏಕವಚನ | | | ಬಹುವಚನ | | |
|---|---|---|---|---|---|
| मैं जाऊँ | | ನಾನು ಹೋಗುವೆ. | हम जावें | | ನಾವು ಹೋಗುವಾ |
| तू जावे | | ನೀನು ಹೋಗು. | तुम जाओ | | ನೀವು ಹೋಗಿರಿ. |
| | | | आप जावें | | ತಾವು ಹೋಗಿರಿ. |
| वह जावे | ಅವನು / ಅವಳು / ಅದು | ಹೋಗಲಿ. | वे जावें | ಅವರು / ಅವು | ಹೋಗಲಿ. |

दे ಮತ್ತು ले ಧಾತುಗಳು ಕೆಳಗೆ ಕಾಣಿಸಿದ ರೂಪಗಳನ್ನು ಹೊಂದುತ್ತವೆ.

| | | | | | |
|---|---|---|---|---|---|
| मैं दूं | | ನಾನು ಕೊಡುವೆ. | हम दें | | ನಾವು ಕೊಡುವಾ. |
| तू दे | | ನೀನು ಕೊಡು. | तुम दो | | ನೀವು ಕೊಡಿರಿ. |
| | | | आप दें | | ತಾವು ಕೊಡಿರಿ. |
| वह दे | ಅವನು / ಅವಳು / ಅದು | ಕೊಡಲಿ | वे दें | ಅವರು / ಅವು | ಕೊಡಲಿ. |

ಮೇಲಿನಂತೆಯೆ ले ಧಾತುವೂ ರೂಪತಾಳುತ್ತದೆ.

## ಅಭ್ಯಾಸ ೧೩.

| | | | |
|---|---|---|---|
| हवा | ಹವೆ | दवा | ಔಷಧಿ |
| नुकसान | ಹಾನಿ | फ़ायदा | ಲಾಭ |

| | | | |
|---|---|---|---|
| खुदा<br>भगवान | ದೇವರು | कसरत | ವ್ಯಾಯಾಮ |
| चबा | ನುರಿಸು, ಜಗಿ | जाड़ा | ಚಳಿ |
| बिना | ಕಳಿ | गरमी | ಸೆಕೆ |
| मार | ಹೊಡೆ | उठा | ಎತ್ತು, ಪಡೆದುಕೊ |
| तोड़ | ಮುರಿ | चौंक | ಬೆಚ್ಚಿಬೀಳು |
| भटक | ಅಲೆದಾಡು | कूद | ಜಿಗಿ |

**ಕನ್ನಡಕ್ಕೆ ಭಾಷಾಂತರಿಸಿರಿ:—**

१. मैं दवा पीवूँ। २. राम व्यापारमें फायदा उठावे। ३. खुदा सबका कल्याण करे। ४. जाड़े में गरम कपड़ा पहनो। ५. वह मैदान में कूदे। ६. गाय रोटी चबावे। ७. तू कुर्सी तोडे। ८. रहीम कसरत करे। ९. पिताजी को बुलाने वह घर जावे। १०. वे सभामें बोलें।

**ಹಿಂದುಸ್ತಾನಿಗೆ ಭಾಷಾಂತರಿಸಿರಿ:—**

೧. ನೀವು ಹಣ್ಣನ್ನು ತಿನ್ನಿರಿ. ೨. ರಾಮನು ಊಟವನ್ನು ಮಾಡಲಿ. ೩. ತಾವು ಹೂವನ್ನು ತೆಗೆದುಕೊಳ್ಳಿರಿ ೪. ನಾವು ನಾಟಕ ನೋಡೋಣ. ೫. ಅವರು ಬೆಂಗಳೂರನ್ನು ತಲ್ಪಲಿ. ೬. ಅವರು ದಿನಾಲು ವ್ಯಾಯಾಮ ಮಾಡಲಿ. ೭. ಸೆಕೆಯಲ್ಲಿ ಅವರು ಹವೆಯಲ್ಲಿ ತಿರುಗಾಡಲಿ. ೮. ನೀನು ರೊಟ್ಟಿಯನ್ನು ನುರಿಸು. ೯. ಹುಡುಗೆಯು ಪ್ರಾರ್ಥನೆಯನ್ನು ಮಾಡಲಿ. ೧೦. ಅವನು ದಿನವನ್ನು ಕಳೆಯಲಿ.

# ಪಾಠ ೧೪.

## ಸರ್ವನಾಮಗಳು

(ಮುಂದರಿದುದು)

ವಿಭಕ್ತಿ ಪ್ರತ್ಯಯಗಳು ಪರವಾದಾಗ ಸರ್ವನಾಮಗಳು ಈ ರೂಪಗಳನ್ನು ತಾಳುತ್ತವೆ.

### मैं ನಾನು

१. मैं, मैंने ನಾನು

२. मुझे, मुझको ನನ್ನನ್ನು

३. मुझसे ನನ್ನಿಂದ

४. मुझको, मेरेलिये, मेरेवास्ते ನನಗೆ, ನನ್ನ ಸಲುವಾಗಿ

५. मुझसे ನನ್ನಿಂದ

६. मेरा, मेरे, मेरी ನನ್ನ

७. मुझमें, मुझपर ನನ್ನಲ್ಲಿ, ನನ್ನಮೇಲೆ

### हम ನಾವು

१. हम, हमने ನಾವು

२. हमें, हमको ನಮ್ಮನ್ನು

३. हमसे ನಮ್ಮಿಂದ

४. हमको, हमारेलिये हमारेवास्ते ನಮಗೆ, ನಮ್ಮ ಸಲುವಾಗಿ

५. हमसे ನಮ್ಮಿಂದ

६. हमारा, हमारे, हमारी ನಮ್ಮ

७. हममें, हमपर ನಮ್ಮಲ್ಲಿ, ನಮ್ಮ ಮೇಲೆ

## तू ನೀನು

१. तू, तूने ನೀನು

२. तुझे, तुझको ನಿನಗೆ

३. तुझसे ನಿನ್ನಿಂದ

४. तुझको, तेरेलिये, तेरेवास्ते ನಿನಗೆ, ನಿನ್ನ ಸಲುವಾಗಿ

५. तुझसे, ನಿನ್ನಿಂದ

६. तेरा, तेरे, तेरी ನಿನ್ನ

७. तुझमें, तुझपर ನಿನ್ನಲ್ಲಿ, ನಿನ್ನ ಮೇಲೆ

## तुम ನೀವು

१. तुम्हें, तुमने ನೀವು

२. तुम्हे, तुमको ನಿಮ್ಮನ್ನು

३. तुमसे ನಿಮ್ಮಿಂದ

४, तुमको, तुम्हारेलिये, तुम्हारेवास्ते ನಿಮಗೆ, ನಿಮ್ಮ ಸಲುವಾಗಿ

५. तुमसे ನಿಮ್ಮಿಂದ

६. तुम्हारा, तुम्हारे, तुम्हारी ನಿಮ್ಮ

७. तुममें, तुमपर ನಿಮ್ಮನ್ನು

## आप ತಾವು

१. आप, आपने ತಾವು

२. आपको ತಮ್ಮನ್ನು

३. आपसे ತಮ್ಮಿಂದ

४. आपको, आपकेलिये, आपकेवास्ते ತಮಗೆ, ತಮ್ಮ ಸಲುವಾಗಿ

५. आपसे ತಮ್ಮಿಂದ

६. आपका, आपके, आपकी ತಮ್ಮ

७. आपमें, आपपर ತಮ್ಮಲ್ಲಿ, ತಮ್ಮ ಮೇಲೆ

## वह ಅವನು, ಅವಳು, ಅದು

१. वह, उसने ಅವನು, ಅವಳು, ಅದು

२. उसे, उसको ಅವನನ್ನು, ಅವಳನ್ನು, ಅದನ್ನು

३. उससे ಅವನಿಂದ, ಅವಳಿಂದ, ಅದರಿಂದ

४. उसको, उसकेलिये, उसकेवास्ते ಅವನಿಗೆ, ಅವಳಿಗೆ, ಅದಕ್ಕೆ,
ಅವನ ಸಲುವಾಗಿ, ಅವಳ ಸಲುವಾಗಿ, ಅದರ ಸಲುವಾಗಿ

५. उससे ಅವನಿಂದ, ಅವಳಿಂದ, ಅದರಿಂದ

६. उसका, उसके, उसकी ಅವನ, ಅವಳ, ಅದರ

७. उसमें, उसपर ಅವನಲ್ಲಿ, ಅವಳಲ್ಲಿ, ಅದರಲ್ಲಿ, ಅವನ ಮೇಲೆ,
ಅದರ ಮೇಲೆ, ಅವಳ ಮೇಲೆ,

## वे ಅವರು, ಅವು

१. वे, उन्होंने ಅವರು, ಅವು

२. उन्हें, उनको ಅವರನ್ನು, ಅವನ್ನು

३. उनसे ಅವರಿಂದ, ಅವುಗಳಿಂದ

४. उनको, उनकेलिये, उनकेवास्ते ಅವರಿಗೆ, ಅವಕ್ಕೆ, ಅವರ ಸಲುವಾಗಿ, ಅವುಗಳ ಸಲುವಾಗಿ

५. उनसे ಅವರಿಂದ, ಅವುಗಳಿಂದ

६. उनका, उनके, उनकी ಅವರ, ಅವುಗಳ

७. उनमें, उनपर ಅವರಲ್ಲಿ, ಅವುಗಳಲ್ಲಿ

## यह ಇವನು, ಇವಳು, ಇದು

१. यह, इसने ಇವನು, ಇವಳು, ಇದು

२. इसे, इसको ಇವನನ್ನು, ಇವಳನ್ನು, ಇದನ್ನು

३. इससे ಇವನಿಂದ, ಇವಳಿಂದ, ಇದರಿಂದ

४. इसको, इसकेलिये इसकेवास्ते ಇವನಿಗೆ, ಇವಳಿಗೆ, ಇದಕ್ಕೆ ಇವನ ಸಲುವಾಗಿ, ಇವಳ ಸಲುವಾಗಿ, ಇದರ ಸಲುವಾಗಿ

५. इससे ಇವನಿಂದ, ಇವಳಿಂದ, ಇದರಿಂದ

६. इसका, इसके, इसकी ಇವನ, ಇವಳ, ಇದರ

७. इसमें, इसपर ಇವನಲ್ಲಿ, ಇವಳಲ್ಲಿ, ಇದರಲ್ಲಿ, ಇವನ ಮೇಲೆ, ಇವಳ ಮೇಲೆ, ಇದರ ಮೇಲೆ

## ये ಇವರು, ಇವು

१. ये, इन्होंने ಇವರು, ಇವು

२. इन्हें, इनको ಇವರನ್ನು, ಇವನ್ನು

३. इनसे ಇವರಿಂದ, ಇವುಗಳಿಂದ

४. इनको, इनकेलिये, इनकेवास्ते ಇವರಿಗೆ, ಇವುಗಳಿಗೆ, ಇವರ ಸಲುವಾಗಿ, ಇವುಗಳ ಸಲುವಾಗಿ

५. इनसे ಇವರಿಂದ, ಇವುಗಳಿಂದ

६. इनका, इनके, इनकी ಇವರ, ಇವುಗಳ

७. इनमें, इनपर ಇವರಲ್ಲಿ, ಇವುಗಳಲ್ಲಿ, ಇವುಗಳ ಮೇಲೆ, ಇವರ ಮೇಲೆ

## कौन ಯಾವನು

१. कौन, किसने ಯಾವನು

२. किसे, किसको ಯಾವನನ್ನು

३. किससे ಯಾವನಿಂದ

४. किसको, किसकेलिये, किसकेवास्ते ಯಾವನಿಗೆ, ಯಾವನ ಸಲುವಾಗಿ

५. किससे ಯಾವನಿಂದ

६. किसका, किसके, किसकी ಯಾವನ

७. किसमें, किसपर ಯಾವನಲ್ಲಿ, ಯಾವನ ಮೇಲೆ

## कौन ಯಾರು

१. कौन, किन्होंने ಯಾರು
२. किन्हें, किनको ಯಾರಿಗೆ
३. किनसे ಯಾರಿಂದ
४. किनको, किनकेलिये, किनकेवास्ते ಯಾರಿಗೆ, ಯಾರ ಸಲುವಾಗಿ
५. किनसे ಯಾರಿಂದ
६. किनका, किनके, किनकी ಯಾರ
७. किनमें, किनपर ಯಾರಲ್ಲಿ, ಯಾರಮೇಲೆ

## कोई ಯಾವನೋ

१. कोई, किसीने ಯಾವನೋ
२. किसीको ಯಾವನನ್ನೋ
३. किसीसे ಯಾವನಿಂದಲೋ
४. किसीको, किसीकेलिये, किसीकेवास्ते ಯಾವನಿಗೋ
५. किसीसे ಯಾವನಿಂದಲೋ
६. किसीका, किसीके, किसीकी ಯಾವನ
७. किसीमें, किसीपर ಯಾವನಲ್ಲಿಯೋ, ಯಾವನಮೇಲೋ

## कोई ಯಾರೋ

१. कोई, किन्हींने ಯಾರೋ
२. किन्हींको ಯಾರನ್ನೋ
३. किन्हींसे ಯಾರಿಂದಲೋ

४. किन्हींको, किन्हीं के लिये, किन्हींके वास्ते ಯಾರಿಗೋ, ಯಾರಿಗಾಗಿಯೋ

५. किन्हींसे ಯಾರಿಂದಲೋ

६. किन्हींका, किन्हींके, किन्हींकी ಯಾರದೋ

७. किन्हींमें, किन्हींपर ಯಾರಲ್ಲಿಯೋ, ಯಾರ ಮೇಲೋ

## जो ಯಾವನು

१. जो, जिसने ಯಾವನು

२. जिसे, जिसको ಯಾವನನ್ನು

३. जिससे ಯಾವನಿಂದ

४. जिसको, जिसके लिये, जिसके वास्ते ಯಾವನಿಗೆ, ಯಾವನ ಸಲುವಾಗಿ

५. जिससे ಯಾವನಿಂದ

६. जिसका, जिसके, जिसकी ಯಾವನ

७ जिसमें, जिसपर ಯಾವನಲ್ಲಿ, ಯಾವನ ಮೇಲೆ

## जो ಯಾರು

१. जो, जिन्होंने ಯಾರು

२. जिन्हें, जिनको ಯಾರನ್ನು

३. जिनसे ಯಾರಿಂದ

४. जिनको, जिनकेलिये, जिनकेवास्ते ಯಾರಿಗೆ, ಯಾರಸಲುವಾಗಿ

५. जिनसे ಯಾರಿಂದ

६. जिनका, जिनके, जिनकी ಯಾರ

७. जीनमें, जिनपर ಯಾರಲ್ಲಿ, ಯಾರ ಮೇಲೆ

(ಸೂಚನೆ:– ಮೇಲೆ ಸರ್ವನಾಮಗಳನ್ನು ಪುಲ್ಲಿಂಗದಲ್ಲಿ ಮಾತ್ರ ನಡೆಯಿಸಲಾಗಿದೆ. ಸ್ತ್ರೀಲಿಂಗದಲ್ಲಿಯೂ ಹೀಗೇ ನಡೆಯುತ್ತವೆ. ಅದರಂತೆಯೇ ಅರ್ಥವನ್ನೂ ಮಾಡಿಕೊಳ್ಳಬೇಕು.)

## ಅಭ್ಯಾಸ ೧೪.

| | | | |
|---|---|---|---|
| आलम | ಜಗತ್ತು | बेकारी | ನಿರುದ್ಯೋಗಿ |
| जेवर | ಒಡವೆ, ಆಭರಣ | हाल | ಸ್ಥಿತಿ, ಅವಸ್ಥೆ |
| बरसात | ಮಳೆಗಾಲ | मौसम | ಋತು |
| मतलब | ಅರ್ಥ, ಅಭಿಪ್ರಾಯ | दर्जी | ಸಿಂಪಿಗ, ದರ್ಜೀ |
| मातम | ಶೋಕ, ದುಃಖ | मक़सद | ಇಚ್ಛೆ, ಗುರಿ |
| रोक | ತಡೆ | उड़ | ಹಾರು |
| पैदा हो | ಹುಟ್ಟು | सह | ಸಹಿಸು |
| शामिल हो | ಕೂಡಿಕೊ | डूब | ಮುಳುಗು |
| मिल जा | ಕೂಡಿಕೊ | सर्दी | ಚಳಿ |

ಕನ್ನಡಕ್ಕೆ ಭಾಷಾಂತರಿಸಿರಿ:—

१. इस आलम में बेकारी बहुत है। २. जाडेके दिनों में सर्दी ज्यादा पड़ती है। ३. तुम्हारे वर्ग में कीतने लड़के हैं? ४. मैं आपका मतलब नहीं समझता हूँ। ५. बरसात के दिनों में किसान

खेत में काम करते हैं। ६. तेरे घर में बहुत जेवर हैं। ७. सीता का मातम देख तुम्हें अधिक दुःख होता है। ८. तेरे लिए पिताजी कलकत्ते से क्या लावेंगे? ९. पानी में उसका भाई डूबगया। १०. उस दलमें सबलोग मिल जावेंगे।

**ಹಿಂದುಸ್ತಾನಿಗೆ ಭಾಷಾಂತರಿಸಿರಿ :—**

೧. ಅವನ ಮಗಳ ಮನೆಯಲ್ಲಿ ಬಹಳ ಜನರು ಇದ್ದಾರೆ. ೨. ಗೋಪಾಲನ ಪಕ್ಷಿಯು ಆಕಾಶದಲ್ಲಿ ಹಾರಾಡುತ್ತದೆ. ೩. ತಾವು ಅವರ ಸಲುವಾಗಿ ಎಷ್ಟು ಕಷ್ಟ ಸಹಿಸುವಿರಿ? ೪. ಜಗತ್ತಿನ ಸ್ಥಿತಿಯು ಚೆನ್ನಾಗಿರುವುದಿಲ್ಲ. ೫. ನಿಮ್ಮ ಹಸುವು ಎಲ್ಲಿಗೆ ಹೋಯಿತು? ೬. ನಿಮ್ಮ ದರ್ಜಿಯು ಬಟ್ಟೆಗಳನ್ನು ಚೆನ್ನಾಗಿ ಹೊಲಿಯುತ್ತಾನೆ. ೭. ರಾಮನು ನಿನ್ನ ತಮ್ಮನನ್ನು ತಡೆಯಲಿ, ನೋಡುವೆ. ೮. ಸ್ವಾತಂತ್ರ್ಯವು ನಮ್ಮ ಗುರಿ. ೯. ನನಗೆ ನೀನು ಪುಸ್ತಕಗಳನ್ನು ಕೊಡುವಿಯಾ? ೧೦. ನಿನ್ನಿಂದ ಈ ಕೆಲಸವು ಆಗಲಿ.

## ಪಾಠ ೧೫.

### ಅವ್ಯಯಗಳು..

ಹಿಂದುಸ್ತಾನಿಯಲ್ಲಿಯೂ ಅವ್ಯಯಗಳೂ ಕನ್ನಡದಲ್ಲಿಯ ಅವ್ಯಯಗಳಂತೆ ರೂಪಾಂತರ ಹೊಂದುವುದಿಲ್ಲ.

ಉದಾಹರಣೆ:- सीता यहाँ है ಸೀತೆಯು ಇಲ್ಲಿ ಇರುತ್ತಾಳೆ.

पीछे कौन आता है? ಹಿಂದೆ ಯಾರು ಬರುತ್ತಾರೆ?

ನಾಮಪದಗಳ ಮುಂದೆ ವಾಕ್ಯದಲ್ಲಿ ಎರಡನೆಯ ಶಬ್ದದ ಕೂಡ ಸಂಬಂಧ ಹಚ್ಚುವಂತಹ ಅವ್ಯಯಕ್ಕೆ ಸಂಬಂಧ ಸೂಚಕ ಅವ್ಯಯವೆನ್ನುತ್ತಾರೆ. ಈ ಅವ್ಯಯಗಳ ಹಿಂದೆ के ಪ್ರತ್ಯಯವು ಬರುತ್ತದೆ.

ಉದಾಹರಣೆ:- घर के सामने पेड़ है  ಮನೆಯ ಮುಂದೆ ಮರವು ಇದೆ.

पेड़ के नीचे बैल है  ಮರದ ಕೆಳಗೆ ಎತ್ತು ಇದೆ.

ಕೆಳಗಿನ ಸಂಬಂಧಸೂಚಕ ಅವ್ಯಯಗಳ ಹಿಂದೆ के ದ ಬದಲಾಗಿ की ಬರುತ್ತದೆ.

ಉದಾಹರಣೆ:- राम मंदिर की तरफ़ जाता है ರಾಮನು ಗುಡಿಯ ಕಡೆಗೆ ಹೋಗುತ್ತಾನೆ.

सीता गोपाल की तरह गाती है ಸೀತೆಯು ಗೋಪಾಲನಂತೆ ಹಾಡುತ್ತಾಳೆ.

## ಅಭ್ಯಾಸ ೧೫.

| | | | |
|---|---|---|---|
| ऊपर | ಮೇಲೆ | बाहर | ಹೊರಗೆ |
| अन्दर, भीतर | ಒಳಗೆ | नज़दीक, पास | ಹತ್ತರ |
| सामने, आगे | ಮುಂದೆ | बिना, सिवा | ಹೊರತು |
| बाद | ಬಳಿಕ, ನಂತರ | साथ | ಸಂಗಡ |
| पहले | ಮುಂಚೆ, ಮೊದಲು | बारे में | ವಿಷಯವಾಗಿ |
| पीछे | ಹಿಂದೆ | तालाब | ಕೆರೆ |
| किनारा | ದಂಡೆ | दफ्तर | ಕಚೇರಿ |
| दोपहर | ಮಧ್ಯಾಹ್ನ | मारे | ದೆಸೆಯಿಂದ. ಸಲುವಾಗಿ |

**ಕನ್ನಡಕ್ಕೆ ಭಾಷಾಂತರಿಸಿರಿ:—**

१. उसके घरके सामने एक बड़ा तालाब है। २. तालाब की तरफ बहुत गायें जा रही हैं । ३. उनके बिना यह काम नहीं होगा।

४. मंदिर के अंदर एक अच्छी मूरत है। ५. नदीके किनारे बड़े बड़े पेड़ है। ६. हमारे मदरसे के नज़दीक एक बगीचा है। ७. राम के बाद मैं खेलूंगा। ८. उसके पहले यहां कौन आया? ९. तू मित्रोंकेसाथ सिनेमा जा। १०. आप गांधीजी के बारे में क्या जानते हैं।

**ಹಿಂದುಸ್ತಾನಿಗೆ ಭಾಷಾಂತರಿಸಿರಿ:—**

೧. ಮರದ ಕೆಳಗೆ ಎತ್ತುಗಳು ಮೇಯುತ್ತಿರುತ್ತವೆ. ೨. ಊರ ಹೊರಗೆ ಒಕ್ಕಲಿಗರು ಹೊಲಗಳಲ್ಲಿ ಕೆಲಸಮಾಡುತ್ತಾರೆ. ೩. ನಿನ್ನೆ ರಾಧೆಯು ಯಾರ ಸಂಗಡ ಪುಣೆಗೆ ಹೋದಳು? ೪. ಅವನಿಗಿಂತ ಮೊದಲು ಸ್ಕೂಲಿಗೆ ಯಾರು ಬಂದರು? ೫. ನಾನು ಮುಂದೆ ಮುಂದೆ ಹೋಗುತ್ತೇನೆ, ನೀನು ಆಮೇಲೆ ಬಾ. ೬. ಹಸಿವೆಯು ದೆಸೆಯಿಂದ ಕೂಸು ಅಳುತ್ತದೆ. ೭. ಮಧ್ಯಾಹ್ನದನಂತರ ನಾವು ನದಿಯ ಕಡೆಗೆ ಹೋಗುವೆವು. ೮. ಅವನ ಹತ್ತರ ಪುಸ್ತಕದ ಹೊರತು ಮತ್ತೇನೂ ಇಲ್ಲ. ೯. ನಿಮಗೆ ರಾಮನ ವಿಷಯವಾಗಿ ಏನಾದರೂ ಗೊತ್ತಿದೆಯೇ? ೧೦. ಗಾಡಿಯೊಳಗೆ ಬಹಳ ಜನರು ಇದ್ದಾರೆ.

## ಪಾಠ ೧೬.

### ಕೃದಂತ ಭಾವನಾಮಗಳು

ಧಾತುವಿಗೆ ना ಪ್ರತ್ಯಯವನ್ನು ಜೋಡಿಸುವುದರಿಂದ ಕೃದಂತಭಾವ ನಾಮಗಳಾಗುತ್ತವೆ.

ಉದಾಹರಣೆ:— बोलना ಮಾತನಾಡುವುದು.

करना ಮಾಡುವುದು

चलना ನಡೆಯುವದು, ಇತ್ಯಾದಿ

ಈ ನಾಮಗಳನ್ನು ಹಿಂದುಸ್ತಾನಿಯಲ್ಲಿ ಸಾಮಾನ್ಯವಾಗಿ ವಿಧ್ಯರ್ಥದಲ್ಲಿ ಕ್ರಿಯೆಯ ಭಾವವನ್ನು ವ್ಯಕ್ತಗೊಳಿಸುವಾಗ ಉಪಯೋಗಿಸುತ್ತಾರೆ.

ಉದಾಹರಣೆ:-

कल वहाँ मत बोलना ನೀವು ನಾಳೆ ಅಲ್ಲಿ ಮಾತನಾಡಬಾರದು.

इस तरह कभी मत चलना ಈ ರೀತಿಯಾಗಿ ನೀವು ಎಂಗೂ ನಡೆಯಬಾರದು.

यह काम कभी मत करना ನೀವು ಈ ಕೆಲಸವನ್ನು ಎಂದೂ ಮಾಡಬಾರದು, ಇತ್ಯಾದಿ.

ಕ್ರಿಯೆಯ ಭಾವವನ್ನು ವ್ಯಕ್ತಪಡಿಸುವಾಗ ಈ ನಾಮಗಳನ್ನು ಪುಲ್ಲಿಂಗ ನಾಮಗಳಂತೆ ಉಪಯೋಗಿಸುತ್ತಾರೆ.

ಉದಾಹರಣೆ:—

बच्चों को मारना बुरा है ಮಕ್ಕಳನ್ನು ಹೊಡೆಯುವುದು ಕೆಟ್ಟದು.

सभा में उसका बोलना आवश्यक है ? ಸಭೆಯಲ್ಲಿ ಅವನು ಮಾತನಾಡುವುದು ಆವಶ್ಯಕವೆ?

सीता का मायके जाना अच्छा है ಸೀತೆಯು ತವರು ಮನೆಗೆ ಹೋಗುವುದು ಒಳ್ಳೆಯದು, ಇತ್ಯಾದಿ.

ಕೃದಂತ ಭಾವನಾಮಗಳ ಮುಂದೆ ವಿಭಕ್ತಿ ಪ್ರತ್ಯಯಗಳು ಬಂದಾಗ ना ಪ್ರತ್ಯಯವು ने ಆಗುತ್ತದೆ.

ಉದಾಹರಣೆ:—

मैं उससे सभा का प्रबंध करने के लिये कहूंगा ನಾನು ಅವನಿಗೆ ಸಭೆಯ ವ್ಯವಸ್ಥೆಯನ್ನು ಮಾಡುವುದಕ್ಕೆ ಹೇಳುವೆನು.

अब रोने से क्या लाभ? ಈಗ ಅಳುವುದರಿಂದೇನು ಲಾಭ?

सच बोलने से काम बनते हैं ನಿಜ ಹೇಳುವುದರಿಂದ ಕೆಲಸಗಳು ಆಗುತ್ತವೆ.

ಹಿಂದುಸ್ತಾನಿಯಲ್ಲಿ ಕರ್ತೃವನ್ನು ಚತುರ್ಥಿ ವಿಭಕ್ತಿಯಲ್ಲಿಟ್ಟು ಕ್ರಿಯಾನಾಮಗಳನ್ನು ಉಪಯೋಗಿಸುವ ಪದ್ಧತಿಯುಂಟು.

ಉದಾಹರಣೆ:-

रामको यह काम करना है ರಾಮನು ಈ ಕೆಲಸವನ್ನು ಮಾಡಬೇಕಾಗಿದೆ.

मुझे हुबलीसे पूना जाना है ನಾನು ಹುಬ್ಬಳ್ಳಿಯಿಂದ ಪುಣೆಗೆ ಹೋಗಬೇಕಾಗಿದೆ.

## ಅಭ್ಯಾಸ ೧೬.

| | | | |
|---|---|---|---|
| मुलाकात करना | ಭೆಟ್ಟಿಯಾಗುವುದು | निबाहना | ನಿರ್ವಹಿಸುವುದು |
| स्वागत करना | ಸ್ವಾಗತಿಸುವುದು | सिर्फ़ | ಕೇವಲ |
| सबक | ಪಾಠ | बासी | ತಂಗಳಾದ |
| मुलायम | ಮೃದುವಾದ | आदत | ಅಭ್ಯಾಸ, ಚಟ |
| बिस्तर | ಹಾಸಿಗೆ | तन्दुरस्ती | ಸ್ವಾಸ್ಥ್ಯ |
| तैर | ಈಸು | झूट | ಸುಳ್ಳು |
| जलपान | ಫಲಾಹಾರ | भीख मांग | ಭಿಕ್ಷೆ ಬೇಡು |
| आसान | ಸುಲಭ | मुश्किल | ಕಠಿಣ |

**ಕನ್ನಡಕ್ಕೆ ಭಾಷಾಂತರಿಸಿರಿ:—**

१. भारत मंत्रीसे मुलाकात करने का सुअवसर मिला २. देशका अध्यक्ष-पद पाना आसान है और उसे निबाहना मुशकिल है। ३. सिर्फ़ लड़कों को पढ़ाना घोडे के आगे गाड़ी रखना है। ४. विद्वानोंका स्वागत करना हमारा कर्तव्य है। ५. लड़कियों को मूर्ख रखना एक बहुत बड़ा पाप होगा। ६. बासी रोटी खाना तन्दुरुस्ती के लिये अच्छा नहीं है। ७. मुलायम बिस्तर पर सोने की आदत अच्छी नहीं है। ८. रोज़ एक एक सबक पढ़ने से बुद्धिमान बनते हैं। ९. झूट बोलने से काम बिगड़ते हैं। १०. आज मुझे गंगानदी में तैरना है।

**ಹಿಂದುಸ್ತಾನಿಗೆ ಭಾಷಾಂತರಿಸಿರಿ:—**

೧. ನಾಳೆ ನೀವು ಫಲಾಹಾರ ಮಾಡಲಿಕ್ಕೆ ನಮ್ಮ ಮನೆಗೆ ಬನ್ನಿ. ೨. ಸುಳ್ಳು ಮಾತನಾಡುವುದು ಒಳ್ಳೆಯ ಅಭ್ಯಾಸವಲ್ಲ. ೩. ಪ್ರೀತಿಸುವುದು ಸುಲಭವಿರುತ್ತದೆ ಮತ್ತು ಅದನ್ನು ನಿರ್ವಹಿಸುವುದು ಕಠಿಣವಿರುತ್ತದೆ. ೪. ಭಿಕ್ಷೆ ಬೇಡುವುದು ಒಳ್ಳೆಯದಲ್ಲ. ೫. ದೊಡ್ಡ ಮನುಷ್ಯರನ್ನು ಸ್ವಾಗತ ಮಾಡುವುದು ಒಳ್ಳೆಯದು. ೬. ಈಸುವುದು ಒಳ್ಳೆಯ ವ್ಯಾಯಾಮವಿರುತ್ತದೆ. ೭. ಚಳಿಯಲ್ಲಿ ಬೆಚ್ಚಗಿನ ಬಟ್ಟೆಗಳನ್ನು ತೊಡುವುದು ಅವಶ್ಯವಿರುತ್ತದೆ. ೮. ಜವಾಹಿರಲಾಲರನ್ನು ಭೆಟ್ಟಿಯಾಗುವ ಸೌಭಾಗ್ಯವು ನನಗೆ ದೊರೆತಿತ್ತು. ೯. ನಮ್ಮ ಕಣ್ಣುಗಳು ನೋಡುವುದಕ್ಕಾಗಿಯೂ ಕಿವಿಗಳು ಕೇಳುವುದಕ್ಕಾಗಿಯೂ ಇವೆ. ೧೦. ನಾನು ತಂಗಿಯನ್ನು ನೋಡಲು ಹುಬ್ಬಳ್ಳಿಗೆ ಹೋಗಬೇಕಾಗಿದೆ.

# ಪಾಠ ೧೭.

## ಆಸನ್ನ ಭೂತಕಾಲ.

ಸಾಮಾನ್ಯ ಭೂತಕಾಲದ ರೂಪಗಳ ಮುಂದೆ हो ಧಾತುವಿನ ವರ್ತಮಾನಕಾಲದ ರೂಪಗಳನ್ನು ಲಿಂಗ ವಚನಗಳಿಗೆ ಅನುಸರಿಸಿ ಸೇರಿಸುವುದರಿಂದ ಆಸನ್ನಭೂತಕಾಲವಾಗುತ್ತದೆ. ಇದಕ್ಕೆ ಪೂರ್ಣ ವರ್ತಮಾನ ಕಾಲವೆಂದೂ ಹೇಳುವ ವಾಡಿಕೆಯುಂಟು.

### आ ಬಾ

#### ಕರ್ತೃ–ಪುಲ್ಲಿಂಗ

| ಏಕವಚನ | | ಬಹುವಚನ | |
|---|---|---|---|
| मैं आया हूँ | ನಾನು ಬಂದಿದ್ದೇನೆ. | हम आये हैं | ನಾವು ಬಂದಿದ್ದೇವೆ. |
| तू आया है | ನೀನು ಬಂದಿದ್ದೀ | तुम आये हो | ನೀವು ಬಂದಿದ್ದೀರಿ. |
| | | आप आये हैं | ತಾವು ಬಂದಿದ್ದೀರಿ. |
| वह आया है | ಅವನು ಬಂದಿದ್ದಾನೆ. ಅದು ಬಂದಿರುತ್ತದೆ. | वे आये हैं | ಅವರು ಬಂದಿದ್ದಾರೆ. ಅವು ಬಂದಿರುತ್ತವೆ. |

#### ಕರ್ತೃ–ಸ್ತ್ರೀಲಿಂಗ

| | | | |
|---|---|---|---|
| मैं आयी हूँ | ನಾನು ಬಂದಿದ್ದೇನೆ. | हम आयी हैं | ನಾವು ಬಂದಿದ್ದೇವೆ. |
| तू आयी है | ನೀನು ಬಂದಿದ್ದೀ | तुम आयी हो | ನೀವು ಬಂದಿದ್ದೀರಿ. |
| | | आप आयी हैं | ತಾವು ಬಂದಿದ್ದೀರಿ. |
| वह आयी है | ಅವಳು ಬಂದಿದ್ದಾಳೆ. | वे आयी हैं | ಅವರು ಬಂದಿದ್ದಾರೆ. |

## ಅಭ್ಯಾಸ ೧೭.

| | | | |
|---|---|---|---|
| मरीज़ | ರೋಗಿ | निकल | ಹೊರಡು |
| दिल | ಹೃದಯ | हसरत | ಆಶೆ, ಆಕಾಂಕ್ಷೆ |
| मदद | ಸಹಾಯ | हज़ारों | ಸಾವಿರಾರು |
| बदले | ಬದಲು | ही | ಯೇ |
| तक | ವರೆಗೆ, ತನಕ | गाफ़िल | ಅಸ್ತವ್ಯಸ್ತ |
| कतल | ಕೊಲೆ | आंसू | ಕಣ್ಣೀರು |
| अजीब | ವಿಚಿತ್ರ | कुत्ता | ನಾಯಿ |
| नतीजा | ಪರಿಣಾಮ, ಫಲಿ ತಾಂಶ | उत्तीर्ण हो | ಪಾಸಾಗು |

**ಕನ್ನಡಕ್ಕೆ ಭಾಷಾಂತರಿಸಿರಿ:—**

१. वह मरीज़ के लिये दवा लाया है। २. सब लड़के मदरसे गये हैं। ३. अुस्ताद कुर्सीपर बैठे हैं। ४. वे स्टेशन के लिए निकले हैं। ५. दिल की हजारों हसरतें दिल में ही रह गयी हैं। ६. उसको मुझसे मदद मिली है। ७. राम के बदलेमे मैं खबर सुनाने आया हूँ। ८. आंगन में चीजें गाफ़ील पड़ी हैं। ९. अत्याचारी उसका कतल करने गया है। १०. मेरी लड़कियाँ आपकी मां से मुलाकात करने गयी हैं।

**ಹಿಂದುಸ್ತಾನಿಗೆ ಭಾಷಾಂತರಿಸಿರಿ.:—**

೧. ಸೀತೆಯ ಕಣ್ಣುಗಳಲ್ಲಿ ಕಣ್ಣೀರು ಬಂದಿವೆ. ೨. ರಾಮನ ಮನೆಯಲ್ಲಿ ವಸ್ತುಗಳು ಅತ್ತಿತ್ತ ಬಿದ್ದಿವೆ. ೩. ನಮ್ಮ ಮನೆಗೆ ಒಬ್ಬ

ವಿಚಿತ್ರ ಮನುಷ್ಯನು ಬಂದಿದ್ದಾನೆ. ೪. ಕೃಷ್ಣನ ಮನೆಯ ನಾಯಿಯು ನಿನ್ನೆಯಿಂದ ಎಲ್ಲಿಗೋ ಹೋಗಿದೆ. ೫. ಪರೀಕ್ಷೆಯ ಫಲವು ಪ್ರಕಟವಾಗಿದೆ ೬ ರಾಷ್ಟ್ರಭಾಷಾ ಪರೀಕ್ಷೆಯಲ್ಲಿ ಚೆನ್ನಾಗಿ ಓದಿದ್ದರಿಂದ ವಿದ್ಯಾಲಯದ ಹುಡುಗಿಯರು ಪಾಸಾಗಿದ್ದಾರೆ. ೭. ನಿಮ್ಮ ಹುಡುಗನು ಇದುವರೆಗೆ ನಿದ್ರಿಸಿದ್ದಾನೆ. ೮. ಈ ಲೆಕ್ಕಣಿಯು ಯಾರಿಗೆ ಸಿಕ್ಕಿದೆ? ೯. ಈ ದಿನ ನಿನ್ನ ಅಣ್ಣನು ಎಲ್ಲಿಗೆ ಹೋಗಿದ್ದಾನೆ? ೧೦. ವಿದ್ಯಾರ್ಥಿಗಳು ಎಲ್ಲಿ ಕುಳಿತಿದ್ದಾರೆ?

## ಪಾಠ ೧೮.

### ಪೂರ್ಣಭೂತಕಾಲ

ಸಾಮಾನ್ಯ ಭೂತಕಾಲದ ರೂಪಗಳ ಮುಂದೆ हो ಧಾತುವಿನ ಭೂತಕಾಲದ ರೂಪಗಳನ್ನು ಲಿಂಗ ವಚನಗಳಿಗೆ ಅನುಸರಿಸಿ ಹಚ್ಚುವುದರಿಂದ ಪೂರ್ಣ ಭೂತಕಾಲವಾಗುತ್ತದೆ.

### आ ಬಾ

| ಏಕವಚನ | | ಬಹುವಚನ | |
|---|---|---|---|
| मैं आया था | ನಾನು ಬಂದಿದ್ದೆನು. | हम आये थे | ನಾವು ಬಂದಿದ್ದೆವು. |
| तू आया था | ನೀನು ಬಂದಿದ್ದೆ. | तुम आये थे | ನೀವು ಬಂದಿದ್ದರಿ. |
| | | आप आये थे | ತಾವು ಬಂದಿದ್ದರಿ. |
| वह आया था | ಅವನು ಬಂದಿದ್ದನು, | वे आये थे | ಅವರು ಬಂದಿದ್ದರು. |
| | ಅದು ಬಂದಿತ್ತು | | ಅವು ಬಂದಿದ್ದವು. |

### ಕರ್ತೃ-ಸ್ತ್ರೀಲಿಂಗ

| | | | |
|---|---|---|---|
| मैं अयी थी | ನಾನು ಬಂದಿದ್ದೆನು. | हम आयी थीं | ನಾವು ಬಂದಿದ್ದೆವು. |

तू आयी थी ನೀನು ಬಂದಿದ್ದೆ

तुम आयी थीं ⎫ ನೀವು ಬಂದಿದ್ದಿರಿ.
आप आयी थीं ⎭ ತಾವು ಬಂದಿದ್ದಿರಿ.

वह आयी थी ಅವಳು ಬಂದಿದ್ದಳು. वे आयी थीं ಅವರು ಬಂದಿದ್ದರು.

## ಅಭ್ಯಾಸ ೧೮.

| | | | |
|---|---|---|---|
| थक | ದಣಿ. | मर | ಸಾಯು. |
| डर | ಹೆದರು. | जल | ಉರಿ. |
| रो | ಅಳು. | खुल | ತೆರೆಯಲ್ಪಡು. |
| बिगड़ | ಕೆಡು, ಸಿಟ್ಟಾಗು. | लटक | ತೂಗಾಡು. |
| फट | ಹರಿದುಹೋಗು. | मिल | ದೊರಕು. |
| ज़ालिम | ಅತ್ಯಾಚಾರಿ. | मज़दूर | ಕೂಲಿಕಾರ. |
| झगड़ा हो | ಜಗಳವಾಗು. | ख़बर | ಸುದ್ದಿ, ಸಮಾಚಾರ. |
| ख़न्दक | ಕಂದಕ. | दीवाना | ಹುಚ್ಚ |
| | | बेवक़ूफ़ी | ಮೂರ್ಖತನ. |

**ಕನ್ನಡಕ್ಕೆ ಭಾಷಾಂತರಿಸಿರಿ:—**

१. मज़दूर बहुत थका था। २. वह हुबली से आया था। ३. रामकी बहन बीमार थी, इसलिये वह रोया। ४. उसकी बेवकूफ़ी से वह लड़की बिगड़ी थी। ५. उस घर का दरवाज़ा कल से खुला था। ६. गोपाल को वह जेवर रास्ते में मिला था। ७. गोविन्द का कपड़ा फटा था। ८. ज़ालिमसे सीता डरी थी। ९. दीवाना खंदक में गिरा था। १०. हमें यह ख़बर कल मिली थी।

**ಹಿಂದುಸ್ತಾನಿಗೆ ಭಾಷಾಂತರಿಸಿರಿ:—**

೧. ಹುಡುಗರು ಸಮಯಕ್ಕೆ ಮುಂಚಿತವಾಗಿ ಸಾಲೆಗೆ ಬಂದಿದ್ದರು. ೨. ಗಾಂಧಿಯವರ ಸಲುವಾಗಿ ಬಹಳ ಜನರು ಬಯಲಿನಲ್ಲಿ ಕೂತಿದ್ದರು. ೩. ಹೆಂಗುಸರು ದೇವಾಲಯಕ್ಕೆ ಹೋಗಿದ್ದರು. ೪. ರಾಮನ ಮನೆಯಲ್ಲಿ ಮಧ್ಯಾಹ್ನ ಯಾರೂ ಇದ್ದಿಲ್ಲ. ೫. ಅವರ ನಾಯಿಯು ಕಂದಕದಲ್ಲಿ ಬಿದ್ದಿತ್ತು. ೬. ದೇವಾಲಯದ ಬಾಗಿಲು ಮಧ್ಯಾಹ್ನದಿಂದ ತೆರೆದಿತ್ತು. ೭. ರಾಮನ ಬೈಸಿಕಲ್ಲು ಮುರಿದಿತ್ತು. ೮. ಅವರಲ್ಲಿ ಜಗಳವು ಆಗಿತ್ತು. ೯. ರಾಮನ ನೆಂಟರು ಬಹಳ ದಣಿದಿದ್ದರು. ೧೦. ಈ ಸುದ್ದಿಯಿಂದ ಅವರು ಅತ್ತಿದ್ದರು.

## ಪಾಠ ೧೯.

### ಸಂಧಿಗ್ಧ ಭೂತಕಾಲ.

ಸಾಮಾನ್ಯ ಭೂತಕಾಲದ ರೂಪಗಳ ಮುಂದೆ हो ಧಾತುವಿನ ಭವಿಷ್ಯತ್ಕಾಲದ ರೂಪಗಳನ್ನು ಲಿಂಗ ವಚನಗಳಿಗೆ ಅನುಸರಿಸಿ ಸೇರಿಸುವುದರಿಂದ ಸಂಧಿಗ್ಧ ಭೂತಕಾಲವಾಗುತ್ತದೆ,

### आ ಬರು

**ಕರ್ತೃ-ಪುಲ್ಲಿಂಗ**

| ಏಕವಚನ | | ಬಹುವಚನ | |
|---|---|---|---|
| मैं आया हूंगा | ನಾನು ಬಂದಿರಬಹುದು. | हम आये होंगे | ನಾವು ಬಂದಿರಬಹುದು. |
| तू आया होगा | ನೀನು ಬಂದಿರಬಹುದು. | तुम आये होंगे | ನೀವು ಬಂದಿರಬಹುದು. |
| | | आप आये होंगे | ತಾವು ಬಂದಿರಬಹುದು |

| | |
|---|---|
| वह आया होगा ಅವನು ಬಂದಿರಬಹುದು, ಅದು ಬಂದಿರಬಹುದು | वे आये होंगे ಅವರು ಬಂದಿರಬಹುದು, ಅವು ಬಂದಿರಬಹುದು. |

## ಕರ್ತೃ–ಸ್ತ್ರೀಲಿಂಗ

| | |
|---|---|
| मैं आयी हूंगी ನಾನು ಬಂದಿರಬಹುದು. | हम आयी होंगी ನಾವು ಬಂದಿರಬಹುದು. |
| तू आयी होगी ನೀನು ಬಂದಿರಬಹುದು. | तुम आयी होंगी ನೀವು ಬಂದಿರಬಹುದು.<br>आप आयी होंगी ತಾವು ಬಂದಿರಬಹುದು. |
| वह आयी होगी ಅವಳು ಬಂದಿರಬಹುದು. | वे आयी होंगी ಅವರು ಬಂದಿರಬಹುದು. |

## ಅಭ್ಯಾಸ ೧೯.

| | | | |
|---|---|---|---|
| उग | ಹುಟ್ಟು, ಅಂಕುರಿಸು | मिट | ಅಳಿದುಹೋಗು |
| फैल | ಹರಡು | लग | ಪ್ರಾರಂಭಿಸು, ತೊಡಗು. |
| बज | ಬಾರಿಸು. | शुरु हो | ಪ್ರಾರಂಭವಾಗು. |
| दौड़ | ಓಡು | टकरा | ತಗಲು. |
| भीड़ | ಗದ್ದಲ. | बनिया | ವ್ಯಾಪಾರಿ, ವೈಶ್ಯ |
| घटी | ಜಾಗಟೆ, ಗಂಟೆ. | लता, बेल | ಬಳ್ಳಿ |
| चोट | ಗಾಯ, ಪೆಟ್ಟು | अनाज | ಧಾನ್ಯ |
| पलंग | ಮಂಚ | नारियल | ತೆಂಗಿನಕಾಯಿ. |

**ಕನ್ನಡಕ್ಕೆ ಭಾಷಾಂತರಿಸಿರಿ:—**

१. पाठशाला कि घंटी बजी होगी। २.मोटार बैलगाडियों से टकरा जायेगी। ३. बेल अब तक सब जगह फैली होगी। ४. दस बजे के पहले नाटक शुरु हुआ होगा। ५. पेड़ पर से गिरने से उसको बड़ी चोट लगी होगी। ६. राम विलसन के घर में पलंग पर बैठा होगा। ७. बरसात हुई होगी और अनाज उगा होगा। ८. मोटर बैलगाड़ीसे टकराई होगी। ९. वे आज अबतक मद्रास पहुंचे होंगे। १०. लड़कियाँ नौ बजे के अन्दर सोयी होंगी।

**ಹಿಂದುಸ್ತಾನಿಗೆ ಭಾಷಾಂತರಿಸಿರಿ:—**

೧. ರೈತರು ಹೊಲಕ್ಕೆ ಹೋಗಿರಬಹುದು. ೨. ರಾಮನು ಪೇಟೆಯಿಂದ ಪುಸ್ತಕಗಳನ್ನು ತಂದಿರಬಹುದು. ೩. ಪೇಟೆಯಲ್ಲಿ ಈ ದಿನ ಬಹಳ ಗದ್ದಲವಿರಬಹುದು. ೪. ಅವನ ವ್ಯಾಪಾರವು ಎಲ್ಲ ಕಡೆಗೂ ಹಬ್ಬಿರಬಹುದು. ೫. ಸಭೆಯು ಈ ಹೊತ್ತಿಗೆ ಸುರುವಾಗಿರಬಹುದು. ೬. ಈ ತೋಟದಲ್ಲಿ ತೆಂಗಿನಕಾಯಿಗಳು ಬಹಳ ಇರಬಹುದು. ೭. ಗೋಪಾಲನ ಸಲುವಾಗಿ ಮೋಹನನು ಬೆಂಗಳೂರಿಗೆ ಹೋಗಿರಬಹುದು. ೮. ಅವರು ಸೀತೆಯನ್ನು ನೋಡಲಿಕ್ಕೆ ಇಲ್ಲಿಗೆ ಬಂದಿರಬಹುದು. ೯. ರಾಮನು ಗಿಡದ ಮೇಲಿಂದ ಬಿದ್ದಿರಬಹುದು ಮತ್ತು ಅವನಿಗೆ ಬಹಳ ಪೆಟ್ಟು ತಗಲಿರಬಹುದು. ೧೦. ಅವನು ಒಂದು ಮೈಲು ಓಡಿರಬಹುದು.

## ಪಾಠ ೨೦.

## ने ನಿಯಮಗಳು

ಸಾಮಾನ್ಯ, ಆಸನ್ನ, ಪೂರ್ಣ ಮತ್ತು ಸಂಧಿಗ್ಧ ಭೂತಕಾಲಗಳಲ್ಲಿ ಕ್ರಿಯಾಪದವು ಸಕರ್ಮಕವಿದ್ದಾಗ ಕರ್ತೃವಿಗೆ ने ಪ್ರತ್ಯಯವು ಸೇರುತ್ತದೆ.

ಉದಾಹರಣೆ:—

मोहनने देखा ಮೋಹನನು ನೋಡಿದನು.

मोहनने देखा है ಮೋಹನನು ನೋಡಿದ್ದಾನೆ.

मोहनने देखा था ಮೋಹನನು ನೋಡಿದ್ದನು.

मोहनने देखा होगा ಮೋಹನನು ನೋಡಿರಬಹುದು.

ಕರ್ತೃವಿಗೆ ने ಪ್ರತ್ಯಯವು ಸೇರಿದಾಗ ಕ್ರಿಯಾಪದವು ಕರ್ಮದ ಲಿಂಗವಚನಗಳಿಗೆ ಅನುಸರಿಸಿ ಬದಲಾಗುತ್ತದೆ.

ಉದಾಹರಣೆ:—

मोहनने घर देखा ಮೋಹನನು ಮನೆಯನ್ನು ನೋಡಿದನು.

मोहनने दो घर देखे ಮೋಹನನು ಎರಡು ಮನೆಗಳನ್ನು ನೋಡಿದನು.

मोहनने किताब देखी ಮೋಹನನು ಪುಸ್ತಕವನ್ನು ನೋಡಿದನು.

मोहनने किताबें देखीं ಮೋಹನನು ಪುಸ್ತಕಗಳನ್ನು ನೋಡಿದನು.

ಕರ್ಮವು ಗುಪ್ತವಾಗಿದ್ದಾಗ ಅಥವಾ ಕರ್ಮಕ್ಕೆ को ಪ್ರತ್ಯಯವು ಸೇರಿದಾಗ ಕ್ರಿಯಾಪದವು ಯಾವಾಗಲೂ ಪ್ರಥಮ ಪುರುಷ ಪುಲ್ಲಿಂಗ ಏಕ ವಚನದಲ್ಲಿಯೇ ಇರುತ್ತದೆ. ಆದರೆ ಸಾಮಾನ್ಯವಾಗಿ को ಪ್ರತ್ಯಯವು ಪ್ರಾಣಿವಾಚಕ ಕರ್ಮಕ್ಕೆ ಸೇರಿಸಲಾಗುವದು.

ಉದಾಹರಣೆ:—

मोहनने देखा ಮೋಹನನು ನೋಡಿದನು.

सीताने देखा ಸೀತೆಯು ನೋಡಿದಳು.

हमने देखा ನಾವು ನೋಡಿದೆವು.

लड़कियोंने देखा ಹುಡುಗಿಯರು ನೋಡಿದರು.

रामने रोटीको खाया ರಾಮನು ರೊಟ್ಟಿಯನ್ನು ತಿಂದನು.

सीताने रोटीको खाया ಸೀತೆಯು ರೊಟ್ಟಿಯನ್ನು ತಿಂದಳು.

लड़कोंने किताबोंको पढ़ा ಹುಡುಗರು ಪುಸ್ತಕವನ್ನು ಓದಿದರು.

लडकोंने किताबोंको पडा ಹುಡುಗರು ಪುಸ್ತಕಗಳನ್ನು ಓದಿದರು.

ಸೂಚನೆ:— ಈ ಕಾಲಗಳಲ್ಲಿ ಕರ್ತೃವಿಗೆ ने ಪ್ರತ್ಯಯವು ಸೇರಿದ ಬಳಿಕ ಕರ್ತೃವಿಗೂ ಕ್ರಿಯಾಪದಕ್ಕೂ ಏನೂ ಸಂಬಂಧವು ಉಳಿಯುವುದಿಲ್ಲ. ಕರ್ಮಕ್ಕೂ ಕ್ರಿಯಾಪದಕ್ಕೂ ಸಂಬಂಧವು ಇರುತ್ತದೆ. ಅರ್ಥಾತ್ ಕ್ರಿಯೆಯು ಕರ್ಮಪ್ರಧಾನವಾಗಿರುವದು.

कर, ले, ಮತ್ತು दे ಧಾತುಗಳು ಭೂತಕಾಲದಲ್ಲಿ ಕೆಳಗಿನ ರೂಪಗಳನ್ನು ತಾಳುತ್ತವೆ.

| ಪುಲ್ಲಿಂಗ | | ಸ್ತ್ರೀಲಿಂಗ | |
|---|---|---|---|
| किया, | किये | की, | कीं |
| दिया, | दिये | दी, | दीं |
| लिया, | लिये | ली, | लीं |

ई ಕಾರಾಂತ ಧಾತುಗಳು ಭೂತಕಾಲದಲ್ಲಿ ಪ್ರತ್ಯಯಗಳು ಸೇರುವ ಮೊದಲು ಹ್ರಸ್ವವಾಗುತ್ತವೆ.

ಉದಾ:— पी ಕುಡಿ पिया, पिये, पी, पीं;

सी ಹೊಲಿ सिया, सिये, सी, सीं

## ಅಭ್ಯಾಸ ೨೦.

| | | | |
|---|---|---|---|
| खिला | ತಿನ್ನಿಸು | जला | ಸುಡು |
| पिला | ಕುಡಿಸು | ढूंढ / खोज | ಹುಡುಕು |
| निगाल | ನುಂಗು | बो | ಬಿತ್ತು |
| खोद | ಅಗಿ, ತೋಡು | लकडी | ಕಟ್ಟಿಗೆ |
| अचार | ಉಪ್ಪಿನಕಾಯಿ | डाकिया | ಪೋಸ್ಟ್‌ಮನ್ |
| कौर | ತುತ್ತು | दवा | ಔಷಧ |
| आस्पताल | ಆಸ್ಪತ್ರೆ | तीर | ಬಾಣ |
| शिकारी | ಬೇಟೆಗಾರ | छोड़ | ಬಿಡು |
| बाघ | ಹುಲಿ | | |
| कुडता | ಅಂಗಿ | | |

ಕನ್ನಡಕ್ಕೆ ಭಾಷಾಂತರಿಸಿರಿ:—

१. माताने बच्चेको रोटी खिलायी। २. लड़कीने लकड़ीयाँ जलायीं। ३. मैंने बिल्ली को दूध पिलाया है। ४. शिकारीने बाघको तीर मारा था। ५. उसने रामके साथ बहुत बातें कीं। ६. किसानने खेत में बीज बोये। ७. आपकी बातों को किसने सुना था? ८. राधाने स्टेशन पर रामकी बहनों को देखा होगा। ९. मेरे दोस्तने मुझसे किताबें लीथीं। १०. डाक्टरने रोगीको दवा फिलायी।

**ಹಿಂದುಸ್ತಾನಿಗೆ ಭಾಷಾಂತರಿಸಿರಿ:—**

೧. ಅವಳು ತುತ್ತನ್ನು ನುಂಗಿದಳು. ೨. ಸೀತೆಯು ಉಪ್ಪಿನಕಾಯಿಯನ್ನು ಮಾಡಿದಳು. ೩ ಟಪಾಲ ಪ್ಯಾದೆಯು ರಾಮನಿಗೆ ಪತ್ರವನ್ನು ಕೊಟ್ಟಿದ್ದನು. ೪ ನಿನ್ನೆ ನಾನು ಪೇಟೆಯಲ್ಲಿ ಒಂದು ತಮಾಷೆಯನ್ನು ನೋಡಿದೆನು ೫. ಬೇಟೆಗಾರನು ಬೇಟೆಯನ್ನು ಹುಡುಕಲಿಕ್ಕೆ ಅಡವಿಗೆ ಹೋದನು. ೬. ನೀವು ಅವರ ಸಲುವಾಗಿ ಏನನ್ನು ಮಾಡಿದಿರಿ? ೭. ಸೀತೆಯು ತಂಗಿಯು ತಮ್ಮನ ಸಲುವಾಗಿ ಅಂಗಿಯನ್ನು ಹೊಲಿದಿದ್ದಳು. ೮. ವಿದ್ಯಾರ್ಥಿಗಳು ಆ ಪುಸ್ತಕಗಳನ್ನು ಓದಿರಬಹುದು. ೯. ಅವನು ನನಗೆ ಹೂವುಗಳನ್ನು ಕೊಟ್ಟಿದ್ದಾನೆ. ೧೦. ನಾವು ದೇವರ ಪ್ರಾರ್ಥನೆಯನ್ನು ಮಾಡಿದೆವು

# ಪಾಠ ೨೧.

## आप ದ ಪ್ರಯೋಗಗಳು.

आप ಎಂಬ ಪದವನ್ನು ಮಧ್ಯಮ ಪುರುಷದಲ್ಲಿ ಗೌರವಾರ್ಥಕವಾಗಿ ಉಪಯೋಗಿಸುವರಲ್ಲದೆ ಕನ್ನಡದ "ಸ್ವ." ಅಥವಾ "ತನ್ನ" ಎಂಬ ಆತ್ಮಾರ್ಥಕವಾಚಕದಂತೆ ಹಿಂದಿಯಲ್ಲಿ ಉಪಯೋಗಿಸುತ್ತಾರೆ. ಆ ಅರ್ಥದಲ್ಲಿ ಅದನ್ನು ಯಾವ ನಾಮಪದದೊಂದಿಗೆ ಯಾವ ವಚನದಲ್ಲಿ ಸೇರಿಸಿದರೂ ಅದು ಆ ನಾಮಪದದ ಅರ್ಥವನ್ನೇ ಸೂಚಿಸುತ್ತದೆ.

ವಿಭಕ್ತಿಪ್ರತ್ಯಯಗಳು ಪರವಾದಾಗ आप ವು अपना, अपने, अपनी ಎಂಬ ರೂಪಗಳನ್ನು ತಾಳುತ್ತದೆ.

**आप** (ಆತ್ಮಾರ್ಥಕ) **ತಾವು, ತಾನು**

१. आप ತಾವು, ತಾನು

२. अपने को ತನ್ನನ್ನು, ತಮ್ಮನ್ನು

३. अपने से ತನ್ನಿಂದ, ತಮ್ಮಿಂದ

४. अपने को, अपने लिये, अपने वास्ते ತನಗೆ, ತನ್ನ ಸಲುವಾಗಿ, ತಮಗೆ, ತಮ್ಮ ಸಲುವಾಗಿ

५. अपने से ತನ್ನಿಂದ, ತಮ್ಮಿಂದ

६. अपना, अपने, अपनी ತನ್ನ, ತಮ್ಮ

७. अपने में, अपने पर ತನ್ನಲ್ಲಿ, ತಮ್ಮಲ್ಲಿ, ತನ್ನ ಮೇಲೆ, ತಮ್ಮ ಮೇಲೆ

ಉದಾಹರಣೆ:-

मैं अपने लिये यह पुस्तक खरीदता हूँ ನಾನು ನನ್ನ ಸಲುವಾಗಿ ಈ ಪುಸ್ತಕವನ್ನು ಕೊಳ್ಳುತ್ತೇನೆ.

वे अपने घर जाते है ಅವರು ತಮ್ಮ ಮನೆಗೆ ಹೋಗುತ್ತಾರೆ.

सीता अपनी किताब लेती है ಸೀತೆಯು ತನ್ನ ಪುಸ್ತಕವನ್ನು ತಕ್ಕೊಳ್ಳುತ್ತಾಳೆ.

लड़कियाँ अपने अपने सामान लेती हैं ಹುಡುಗಿಯರು ತಮ್ಮ ತಮ್ಮ ಸಾಮಾನುಗಳನ್ನು ತೆಗೆದುಕೊಳ್ಳುತ್ತಾರೆ.

**ಸೂಚನೆ**:- ಪ್ರಥಮಾ ವಿಭಕ್ತಿಯಲ್ಲಿ आप ದ ಬದಲು खुद ಉಪಯೋಗಿಸುತ್ತಾರೆ.

ಉದಾಹರಣೆ:-

मैं खुद जाता हूँ ನಾನು ಸ್ವತಃ ಹೋಗುತ್ತೇನೆ.

वे खुद यह काम करते हैं ಅವರು ಸ್ವತಃ ಈ ಕೆಲಸವನ್ನು ಮಾಡುತ್ತಾರೆ.

सीता खुद कपड़ा सीती हैं ಸೀತೆಯು ಸ್ವತಃ ಅರಿವೆ ಹೊಲಿಯುತ್ತಾಳೆ.

# ಅಭ್ಯಾಸ ೨೧.

| | |
|---|---|
| मुँह ಮುಖ | कान ಕಿವಿ |
| अकलमंद ಬುದ್ಧಿವಂತ | प्याला ಬಟ್ಟಲು, ಕಪ್ |
| लेकिन, पर ಆದರೆ, ಪರಂತು | या ಅಥವಾ |
| किराया ಬಾಡಿಗೆ | महीना ತಿಂಗಳು, ಮಾಸ. |
| रवाना हो ಹೊರಡು | पच ಜೀರ್ಣವಾಗು, ಪಚನವಾಗು. |
| खो ಕಳೆದುಕೊಳ್ಳು | अदाकर ಸಲ್ಲಿಸು, ತಿರುಗಿ ಕೊಡು |
| डांट ಬೆದರಿಸು | कमा ಗಳಿಸು, ಸಂಪಾದಿಸು. |
| शोर मचा ಗದ್ದಲಹಾಕು, ಗಲಭೆ ಮಾಡು | कर्ज़ ಸಾಲ |

**ಕನ್ನಡಕ್ಕೆ ಭಾಷಾಂತರಿಸಿರಿ:—**

१. मैं अपनी आँखोंसे देखता हूँ। २. उन्होंने यह समाचार अपने कानोंसे सुना। ३. इस घर का किराया उसने खुद दिया। ४. सीताने खुद लडके को प्याला भर दूध दिया। ५. भैंस का दूध जल्दी नहीं पचता। ६. वे खुद अकलमंद हैं पर कुछ नहीं कमाते। ७. उस्तादजीने लडकों से अपनी जगह पर बैठनेके लिए कहा। ८. मोटर धारवाड से ठीक दस बजे रवाना हुई थी। ९. खुद कान से सुनो, या आंख से देखो। १०. मोहनने अपना सामान खोया होगा।

**ಹಿಂದುಸ್ತಾನಿಗೆ ಭಾಷಾಂತರಿಸಿರಿ:—**

೧. ಅವರೇ ಸ್ವತಃ ವಸಂತನನ್ನು ನೋಡಲಿಕ್ಕೆ ಬಂದಿದ್ದರು ಆದರೆ ಅವನು ಊರಲ್ಲಿ ಇರಲಿಲ್ಲ. ೨. ನಾನೇ ಸ್ವತಃ ಅವರ ಎಲ್ಲ ಸಾಲವನ್ನು ತೀರಿಸಿರುವೆನು. ೩. ಎರಡು ತಿಂಗಳಿಂದ ಅವರು ಈ ಮನೆಯ ಬಾಡಿಗೆಯನ್ನು ಕೊಟ್ಟಿಲ್ಲ. ೪. ರಾಧೆಯು ತನ್ನ ಸಲುವಾಗಿ ಎರಡು ಬಟ್ಟಲುಗಳನ್ನು ಕೊಂಡಳು. ೫. ಹುಡುಗರು ತಮ್ಮ ಶಾಲೆಯಲ್ಲಿ ಗದ್ದಲ ಹಾಕುತ್ತಾರೆ. ೬. ಗುರುಗಳು ತಮ್ಮ ಹುಡುಗರನ್ನು ಬೆದರಿಸಿದರು. ೭. ಬುದ್ಧಿವಂತ ಮನುಷ್ಯರು ತಮ್ಮ ಸಲುವಾಗಿ ಗಳಿಸುವದಿಲ್ಲ. ೮. ನೀವು ನಿಮ್ಮ ಪುಸ್ತಕಗಳನ್ನು ಎಲ್ಲಿ ಕಳೆದುಕೊಂಡಿರಿ? ೯. ಬೆಂಗಳೂರಿನಿಂದ ಗಾಡಿಯು ನಿನ್ನೆಯೇ ಹೊರಟಿರಬಹುದು. ೧೦. ರಮೇಶನು ಗಳಿಸಲಿಕ್ಕೆ ಈ ತಿಂಗಳು ದಿಲ್ಲಿಗೆ ಹೊರಡುವನು.

## ಪಾಠ ೨೨.

### ಸಹಾಯಕ ಕ್ರಿಯಾಪದಗಳು.

ಪ್ರಧಾನ ಕ್ರಿಯಾಪದಕ್ಕೆ सक, चुक, दे, लग, पा ಮತ್ತು चाह ಎಂಬ ಸಹಾಯಕ ಕ್ರಿಯಾಪದಗಳು ಸೇರುತ್ತವೆ. ಆಗ ಸಹಾಯಕ ಕ್ರಿಯಾಪದವು ಮಾತ್ರ ಕಾಲ, ಪುರುಷ, ಲಿಂಗ, ವಚನಗಳಿಗನುಸರಿಸಿ ಬದಲಾಗುತ್ತದೆ. ಪ್ರಧಾನ ಕ್ರಿಯಾಪದವು ಯಾವ ರೂಪಾಂತರವನ್ನೂ ಹೊಂದುವದಿಲ್ಲ.

ಉದಾಹರಣೆ:— मैं खा सकता हूँ ನಾನು ತಿನ್ನಬಲ್ಲೆನು.
हम खा सकते हैं ನಾವು ತಿನ್ನಬಲ್ಲೆವು.
लड़की नहीं खा सकी ಹುಡುಗಿಯು ತಿನ್ನಲಾರದವಳಾದಳು.

"ಶಕ್ಯತೆ"ಯನ್ನು ತೋರಿಸುವದಕ್ಕಾಗಿ ಪ್ರಧಾನ ಕ್ರಿಯಾಪದಕ್ಕೆ "सक" ಸೇರಿಸುತ್ತಾರೆ.

ಉದಾಹರಣೆ:— मैं जा सकता हूँ ನಾನು ಹೋಗಬಲ್ಲೆನು.

वे अंग्रेजी लीखते हैं ಅವರು ಇಂಗ್ಲೀಷ ಬರೆಯಬಲ್ಲರು.

राधा यहाँ नहीं बैठ सकेगी ರಾಧೆಯು ಇಲ್ಲಿ ಕೂಡಲಾರಳು.

हम वह नाटक नहीं देख सके ನಾವು ಆ ನಾಟಕವನ್ನು ನೋಡಲಾರದವರಾದೆವು.

ಧಾತುವಿಗೆ "चुक" ಸೇರಿಸುವದರಿಂದ ಕ್ರಿಯೆಯ "ಮುಕ್ತಾಯ"ವು ಅಥವಾ "ಸಂಪೂರ್ಣತೆ"ಯು ಗೊತ್ತಾಗುವದು.

ಉದಾಹರಣೆ:—वह खा चुका ಅವನು ಉಂಡು ಮುಗಿಸಿದನು.

सीता सो चुकी ಸೀತೆಯು ನಿದ್ದೆ ಮುಗಿಸಿದಳು.

वे देख चुके थे ಅವರು ನೋಡಿ ಬಿಟ್ಟಿದ್ದರು.

मैं पढ़ चुकता हूँ ನಾನು ಓದಿ ಮುಗಿಸುತ್ತೇನೆ.

पा ಎಂಬುದನ್ನು ಧಾತು ಅಥವಾ ರೂಪಾಂತರ ಹೊಂದಿದ ಭಾವನಾಮದ ಸಂಗಡ "ಸಮರ್ಥತೆ"ಯನ್ನು ತೋರಿಸುವದಕ್ಕಾಗಿ ಉಪಯೋಗಿಸುತ್ತಾರೆ,

ಉದಾಹರಣೆ:-

गोपाल आज नाटक नहीं जा पया अथवा जाने पाया । ಗೋಪಾಲನು ಈ ದಿನ ನಾಟಕಕ್ಕೆ ಹೋಗಲು ಸಮರ್ಥನಾಗಲಿಲ್ಲ.

मैं देख पाया ಅಥವಾ देखने पाया ನಾನು ನೋಡಲು ಸಮರ್ಥನಾದೆ.

तुम नहीं सुन पाओगे ಅಥವಾ सुनने पाओगे ನೀವು ಕೇಳಲಾರಿರಿ.

सीता यह काम कर पाती है ಅಥವಾ करने पाती है ಸೀತೆಯು ಈ ಕೆಲಸವನ್ನು ಮಾಡಲು ಸಮರ್ಥಳಿದ್ದಾಳೆ.

"ಅಪೇಕ್ಷೆ" ಯನ್ನು ಸೂಚಿಸುವದಕ್ಕೆ ಭಾವನಾವಾದ ಸಂಗಡ चाह ಎಂಬುದನ್ನು ಉಪಯೋಗಿಸುತ್ತಾರೆ.

ಉದಾಹರಣೆ:—

मैं पानी पीना चाहता हूँ ನಾನು ನೀರು ಕುಡಿಯಲು ಅಪೇಕ್ಷಿಸುತ್ತೇನೆ.

राधा क्या पढ़ना चाहती है? ರಾಧೆಯು ಏನು ಓದಲು ಇಚ್ಛಿಸುತ್ತಾಳೆ?

उन्होंने नाटक देखना चाहा ಅವರು ನಾಟಕವನ್ನು ನೋಡಲು ಇಚ್ಛಿಸಿದರು.

वे कल बेंगलूर जाना चाहेंगी ಅವರು ನಾಳೆ ಬೆಂಗಳೂರಿಗೆ ಹೋಗಲು ಇಚ್ಛಿಸುವರು.

ಸೂಚನೆ:— ಪ್ರಧಾನ ಕ್ರಿಯಾಪದವು ಸಕರ್ಮಕವಾಗಿದ್ದರೂ, ಅಕರ್ಮಕವಾಗಿದ್ದರೂ चाह ಮತ್ತು दे ಇವುಗಳ ಕರ್ತೃವಿಗೆ ಭೂತಕಾಲದಲ್ಲಿ न ಸೇರಿಸಬೇಕು.

ಉದಾಹರಣೆ:—

गोपालने उसे जाने दिया ಗೋಪಾಲನು ಅವನನ್ನು ಹೋಗಗೊಟ್ಟನು.

सीताने सोना चाहा ಸೀತೆಯು ಮಲಗಲು ಇಚ್ಛಿಸಿದಳು.

ಭಾವನಾವಾದ ಅಂತ್ಯಾಕ್ಷರ ना ವನ್ನು ने ಮಾಡಿ दे ಸಹಾಯ ಕ್ರಿಯಾಪದವನ್ನು "ಅನುಮತಿ"ಯ ಅರ್ಥಬೋಧಕವಾಗಿ ಉಪಯೋಗಿಸುತ್ತಾರೆ.

ಉದಾಹರಣೆ:–तुम रामको जाने दो ನೀವು ರಾಮನನ್ನು ಹೋಗಗೊಡಿರಿ.

वे लडकों को घर नहीं जाने देते हैं ಅವರು ಹುಡುಗರನ್ನು ಮನೆಗೆ ಹೋಗಗೊಡುವದಿಲ್ಲ.

मोहनने सीताको नाटक देखने दिया ಮೋಹನನು ಸೀತೆಯನ್ನು ನಾಟಕ ನೋಡಗೊಟ್ಟನು.

मुझे जरूर वे यह काम करने देंगे ಅವರು ಅವಶ್ಯವಾಗಿ ನನಗೆ ಈ ಕೆಲಸವನ್ನು ಮಾಡಗೊಡುವರು.

ಕಾರ್ಯದ "ಪ್ರಾರಂಭ"ವನ್ನು ಸೂಚಿಸುವದಕ್ಕೆ लग ನ್ನು ಕ್ರಿಯಂತೆ ರೂಪಾಂತರ ಹೊಂದಿದ ಭಾವನಾಮದೊಡನೆ ಉಪಯೋಗಿಸುತ್ತಾರೆ.

ಉದಾಹರಣೆ:-

सीता खाने लगी । ಸೀತೆಯು ಉಣತೊಡಗಿದಳು.

वह रोने लगता है ।ಅವನು ಅಳತೊಡಗುತ್ತಾನೆ.

वे चाय पीने लगते हैं । ಅವರು ಚಹಾ ಕುಡಿಯು ತೊಡಗುತ್ತಾರೆ.

लडकियाँ पढ़ने लगीं । ಹುಡುಗಿಯರು ಓದತೊಡಗಿದರು.

## ಅಭ್ಯಾಸ ೨೨.

| | | | |
|---|---|---|---|
| अगुआ, नेता | ಮುಖಂಡ | ना मुमकिन | ಅಸಂಭವ |
| आइना | ಕನ್ನಡಿ | आमदनी | ಉತ್ಪನ್ನ |
| उम्र | ವಯಸ್ಸು | कलेवा | ಮುಂಜಾನೆಯೂಟ |
| खुशबू | ಸುಗಂಧ, ಸುವಾಸನೆ. | जंग | ಯುದ್ಧ |
| बढ़ | ಹೆಚ್ಚಿಸು | बन | ಆಗು, ತಯಾರ ಆಗು |
| उड़ा | ಹಾರಿಸು | लिटा | ಮಲಗಿಸು |
| फाड़ | ಹರಿ | पढ़ा | ಓದಿಸು |
| लाद | ಹೇರು | रुला | ಅಳಿಸು |

**ಕನ್ನಡಕ್ಕೆ ಭಾಷಾಂತರಿಸಿರಿ:—**

१. वसंत अपने गांवका अगुआ बनना चाहता है २. वे राधा की उम्र जानना चाहते हैं । ३. इस कामसे राम की आमदनी

बढ़ने लगी । ४. गांधीजी भारतमें सत्याग्रह जंग शुरु नहीं होंने देते हैं । ५. प्रमीला अपने बच्चेको लिटा चुकी । ६. वे उस गाडी पर फल लाद सकते हैं। ७. मैं कपड़ा नही फाड़ने दूगां। ८. तुम वह पक्षी नहीं उड़ा पाओगे। ९. गुरुजी अपने लड़कों को पढ़ाने लगते हैं। १०. उन्होंने उस छोटे बच्चेको रुलाना चाहा।

**ಹಿಂದುಸ್ತಾನಿಗೆ ಭಾಷಾಂತರಿಸಿರಿ:—**

೧. ರಾಧೆಯು ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಲು ಇಚ್ಛಿಸುತ್ತಾಳೆ. ೨. ನಾವು ನಮ್ಮ ಉತ್ಪನ್ನವನ್ನು ಹೆಚ್ಚಿಸಹತ್ತಿದೆವು. ೩. ಹುಡುಗನು ಆ ವಸ್ತ್ರವನ್ನು ಹರಿದುಬಿಟ್ಟನು. ೪. ಅವನ ಮನೆಯಲ್ಲಿ ಹೂವಿನ ಸುವಾಸನೆಯು ಹಬ್ಬತೊಡಗಿತು. ೫. ಒಂದೇ ತುತ್ತಿನಲ್ಲಿ ಅವನು ಈ ಹಣ್ಣನ್ನು ತಿನ್ನಲು ಇಚ್ಛಿಸುತ್ತಾನೆ ಆದರೆ ಇದು ಅಸಂಭವ ಇದೆ. ೬. ಸೀತೆಯು ತನ್ನ ಮಗನನ್ನು ಮಲಗಿಸಲು ಸಮರ್ಥಳಾದಳು. ೭. ತಾವು ಆ ಹುಡುಗಿಯರನ್ನು ನಗಿಸಲಾರಿರಿ. ೮. ನಾವು ನಮ್ಮ ಆಯುಷ್ಯವನ್ನು ಹೆಚ್ಚಿಸಬಲ್ಲೆವು. ೯. ಅವರು ನನ್ನನ್ನು ನಾಟಕ ನೋಡಲಿಕ್ಕೆ ಹೋಗಗೊಡಲಿಲ್ಲ. ೧೦. ಮೋಹಿನಿಯು ತನ್ನ ಊರಿಗೆ ಹೋಗ ಬಯಸಿದಳು

## ಪಾಠ ೨೩.

### ಕರ್ತರಿ ನಾಮಗಳು

ಹಿಂದುಸ್ತಾನಿಯಲ್ಲಿ वाला ಎಂಬ ಪ್ರತ್ಯಯವನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ. ಇದು ಭಿನ್ನ ಭಿನ್ನ ಅರ್ಥಗಳನ್ನು ಸೂಚಿಸುತ್ತದೆ. ಇದನ್ನು ಉಪಯೋಗಿಸುವ ಕೆಲವು ರೀತಿಗಳನ್ನು ಕೆಳಗೆ ಕೊಟ್ಟಿರುತ್ತದೆ.

ಕನ್ನಡದಲ್ಲಿ 'ಅವ' ಎಂಬ ಪ್ರತ್ಯಯವನ್ನು ಧಾತುವಿಗೆ ಸೇರಿಸುವುದರಿಂದ ಯಾವ ರೂಪವಾಗುವುದೋ ಅವೇ ರೂಪವು ಹಿಂದುಸ್ತಾನಿಯಲ್ಲಿ ಧಾತುವಿಗೆ वाला ಸೇರಿಸುವುದರಿಂದ ಆಗುತ್ತದೆ. ಈ ಪದಕ್ಕೂ ಧಾತುವಿಗೂ ನಡುವೆ ने ಬರುತ್ತದೆ.

ಉದಾ:-करनेवाला ಮಾಡುವವ, जानेवाला ಹೋಗುವವ, खानेवाला ತಿನ್ನುವವ, देनेवाला ಕೊಡುವವ, आनेवाला ಬರುವವ, ಇತ್ಯಾದಿ.

ಇದು ಶೀರ ಸಿಕಟ ಭವಿಷ್ಯದರ್ಥವನ್ನು ಸೂಚಿಸುವಾಗಲೂ ಉಪಯೋಗಿಸಲ್ಪಡುತ್ತದೆ.

ಉದಾ:— प्रभाकर जानेवाला है ಪ್ರಭಾಕರನು ಹೋಗುವವನಿದ್ದಾನೆ, वनमाला आज आनेवाली है ವನಮಾಲೆಯು ಈದಿನ ಬರುವವಳಿದ್ದಾಳೆ, ಇತ್ಯಾದಿ.

ನಾಮಗಳಿಗೆ ಇದು ಸೇರಿದಾಗ ಒಡೆತನವನ್ನು ಸೂಚಿಸುತ್ತದೆ.

ಉದಾ:—घरवाला ಮನೆಯ ಯಜಮಾನ, गाड़ीवाला ಗಾಡಿಯ ಯಜಮಾನ, दुकानवाला ಅಂಗಡಿಯ ಯಜಮಾನ, ಇತ್ಯಾದಿ.

ವಾಸಸ್ಥಾನವನ್ನು ಸೂಚಿಸುವುದಕ್ಕಾಗಿಯೂ ಉಪಯೋಗಿಸಲ್ಪಡುತ್ತದೆ

ಉದಾ:—काशीवाला आदमी ಕಾಶಿಯ ಮನುಷ್ಯ, शहरवाला ಪಟ್ಟಣದ, ऊपरवाला ಮೇಲಿನ ಇತ್ಯಾದಿ.

ಬೆಲೆಯನ್ನು ಸೂಚಿಸುವುದಕ್ಕಾಗಿಯೂ ಉಪಯೋಗಿಸಲ್ಪಡುತ್ತದೆ

ಉದಾ:—बीस रूपयेवाली घड़ी ಇಪ್ಪತ್ತು ರೂಪಾಯಿ ಬೆಲೆಯ ಗಡಿಯಾರ

दस आनेवाली किताब ಹತ್ತು ಆಣೆ ಬೆಲೆಯ ಪುಸ್ತಕ, ಇತ್ಯಾದಿ.

वाला ಪ್ರತ್ಯಯವು ತನ್ನ ಮುಂದೆ ಬರುವ ನಾಮದ ಲಿಂಗ ವಚನ ಗಳಿಗೆ ಅನುಸಾರವಾಗಿ ಮಾರ್ಪಡುತ್ತದೆ.

ಉದಾ:—जानेवाला आदमी ಹೋಗುವ ಮನುಷ್ಯ.
जानेवाले आदमी ಹೋಗುವ ಮನುಷ್ಯರು.
जानेवाली औरत ಹೋಗುವ ಹೆಂಗುಸು.
जानेवाली औरतें ಹೋಗುವ ಹೆಂಗುಸರು.

## ಅಭ್ಯಾಸ ೨೨.

| | | | |
|---|---|---|---|
| बर्तन | ಪಾತ್ರೆ | मांज | ತಿಕ್ಕು |
| ज़मानत | ಜಾಮೀನು | फिसल | ಜಾರು |
| किराया | ಬಾಡಿಗೆ | घमंड | ಗರ್ವ |
| सलाह | ಸಲಹೆ | ठगा | ಮೋಸಮಾಡು |
| उपली | ಬೆರಣಿ, ಕುಳ್ಳು | अगला | ಮುಂದಿನ |
| निकल | ಹೊರಡು | सफ़र | ಪ್ರವಾಸ |
| गुस्सा | ಸಿಟ್ಟು, ಕೋಪ | तैर | ಈಜು, ಈಸು |
| अमरूद | ಪೇರಲಹಣ್ಣು | लेकिन | ಆದರೆ |

**ಕನ್ನಡಕ್ಕೆ ಭಾಷಾಂತರಿಸಿರಿ:—**

बर्तन मांजनेवाली औरत मगनलाल की बहन है। २. उस दिन ज़मानत देनेवाला मेरा भाई था। ३. आज गोपालकी बहनें गांवसे आनेवाली हैं ४. हमारे गांवके ज़मीनदारके पास एक सौ

रुपयेवाला घोड़ा है । ५. मकानवाला हमसे किराया पहले मांगता है। ६. दूधवालाने आज दूध देने नहीं आया है । ७. आपने तांगावाले को कितने पैसे दिये ? ८. पैसेवाले बडे घमंड़ी होते हैं । ९. बंबई वाले व्यापार करने बेंगलोर जावेगे। १०. ठगानेवालों से बचनेकी सलाह मेरे दोस्तने दी ।

**ಹಿಂದುಸ್ತಾನಿಗೆ ಭಾಷಾಂತರಿಸಿರಿ:—**

೧. ಅವರು ಈದಿನ ಎಲ್ಲಿಗೆ ಹೋಗುವವರಿದ್ದಾರೆ? ೨. ಬೆರಣಿಕೆ ಗಳನ್ನು ಮಾರುವವಳು ಈ ದಿನಗಳಲ್ಲಿ ಬರುವುದಿಲ್ಲ ೩. ನಮ್ಮ ಸ್ಕೂಲಿನ ವಿದ್ಯಾರ್ಥಿಗಳು ಮುಂದಿನ ತಿಂಗಳಲ್ಲಿ ಪ್ರವಾಸಕ್ಕೆ ಹೊರಡುವವರಿದ್ದಾರೆ. ೪. ಈ ದಿನ ಹುಡುಗೆಯರೂ ಗಂಗಾ ನದಿಯಲ್ಲಿ ಈಜುವವರಿದ್ದರು. ೫. ಸುಳ್ಳಾಡುವವರನ್ನು ಕಂಡರೆ ನನಗೆ ಕೋಪ ಬರುತ್ತದೆ. ೬ ಹಣ್ಣು ಮಾರುವವನು ಪೇರಲ ಹಣ್ಣುಗಳನ್ನು ಮಾರಲಿಕ್ಕೆ ಬಂದಿದ್ದನು. ೭. ನಾಳಿನ ಸಭೆಗೆ ಗಾಂಧೀಜಿಯವರು ಅಧ್ಯಕ್ಷರಾಗುವವರಿದ್ದಾರೆ ನಾವು ಹೋಗೋಣ. ೮. ಬಹಳ ಮಾತನಾಡುವವರು ಕಡಿಮೆ ಕೆಲಸ ಮಾಡು ತ್ತಾರೆ. ೯. ಸೀತೆಯು ಈ ದಿನ ಸಭೆಯಲ್ಲಿ ಹಾಡುವವಳಿದ್ದಳು, ಆದರೆ ಸಮಯವು ಸಿಕ್ಕಲಿಲ್ಲ. ೧೦. ನನ್ನ ಮಿತ್ರನ ಬಳಿಯಲ್ಲಿ ಐದು ರೂಪಾಯಿಯ ಲೆಕ್ಕಣಿಕೆಯಿದೆ.

## ಪಾಠ ೨೪.

### ತಾತ್ಕಾಲಿಕ ಭವಿಷ್ಯತ್ಕಾಲ.

ತಾತ್ಕಾಲಿಕ ವರ್ತಮಾನ ಕಾಲಗಳ ರೂಪಕ್ಕೆ ಪುರುಷಗಳ ಲಿಂಗ ವಚನಗಳಿಗನುಸರಿಸಿ हूंगा, होगा, होंगे, होगे ಮತ್ತು हूंगी, होगी, होंगी ಸಹಾಯ ಕ್ರಿಯಾಪದಗಳನ್ನು ಸೇರಿಸುವದರಿಂದ ತಾತ್ಕಾಲಿಕ ಭವಿ ಷ್ಯತ್‌ಕಾಲ ವಾಗುತ್ತದೆ.

### ಪುಲ್ಲಿಂಗ

ಉದಾಹರಣೆ:-

मैं खा रहा हूंगा ನಾನು ಉಣ್ಣುತ್ತಾ ಇರಬಹುದು.

राम देख रहा होगा ರಾಮನು ನೋಡುತ್ತಾ ಇರಬಹುದು.

वे सो रहे होंगे ಅವರು ಮಲಗುತ್ತಾ ಇರಬಹುದು.

तुम सुन रहे होगे ನೀವು ಕೇಳುತ್ತಾ ಇರಬಹುದು.

### ಸ್ತ್ರೀಲಿಂಗ

मैं पी रही हूंगी ನಾನು ಕುಡಿಯುತ್ತಾ ಇರಬಹುದು.

चंपा गा रही होगी ಚಂಪೆಯು ಹಾಡುತ್ತಾ ಇರಬಹುದು.

लडकियाँ सी रही होंगी ಹುಡುಗಿಯರು ಹೊಲಿಯುತ್ತಾ ಇರಬಹುದು.

तुम लिख रही होगी ನೀವು ಬರೆಯುತ್ತಾ ಇರಬಹುದು.

### ಸಂದಿಗ್ಧ ವರ್ತಮಾನಕಾಲ

ಸಂದಿಗ್ಧ ವರ್ತಮಾನಕಾಲದಲ್ಲಿ ವರ್ತಮಾನ ಕಾಲದ ರೂಪಗಳಿಗೆ हूंगा, होगा, होंगे, होगे ಮತ್ತು हूंगी, होगी, होंगी ಎಂಬ ಸಹಾಯ ಕ್ರಿಯಾಪದಗಳನ್ನು ಸೇರಿಸುವರು.

### ಪುಲ್ಲಿಂಗ

ಉದಾಹರಣೆ:-

मैं गाता हूंगा ನಾನು ಹಾಡುತ್ತಿರಬಹುದು.

गोपाल आता होगा ಗೋಪಾಲನು ಬರುತ್ತಿರಬಹುದು.

तुम खाते होगे ನೀವು ಉಣ್ಣುತ್ತಿರಬಹುದು.

वे ढ़पते होंगे ಅವರು ಓದುತ್ತಿರಬಹುದು.

## ಸ್ತ್ರೀಲಿಂಗ

मैं सीती हूगी ನಾನು ಹೊಲಿಯುತ್ತಿರಬಹುದು.
मोहिनी सोती होगी ಮೋಹಿನಿಯು ಮಲಗುತ್ತಿರಬಹುದು.
बहनें गाती होगी ಸಹೋದರಿಯರು ಹಾಡುತ್ತಿರಬಹುದು.
तुम सीखती होगी ನೀವು ಕಲಿಯುತ್ತಿರಬಹುದು.

## ತಾತ್ಕಾಲಿಕ ಭೂತಕಾಲ

ತಾತ್ಕಾಲಿಕ ವರ್ತಮಾನ ಕಾಲದ ರೂಪಗಳಿಗೆ ಲಿಂಗವಚನಗಳಿಗನು ಸರಿಸಿ था, थे, थी, थीं ಎಂಬ ಸಹಾಯ ಕ್ರಿಯಾಪದಗಳನ್ನು ಸೇರಿಸುವ ದರಿಂದ ತಾತ್ಕಾಲಿಕ ಭೂತಕಾಲವಾಗುತ್ತದೆ.

ಉದಾಹರಣೆ:—

मोहन रोटी खा रहा था ಮೋಹನನು ರೊಟ್ಟಿಯನ್ನು ತಿನ್ನುತ್ತಾ ಇದ್ದರು.

वे नाटक देख रहे थे ಅವರು ನಾಟಕವನ್ನು ನೋಡುತ್ತಾ ಇದ್ದರು

शांता गीत गा रही थी ಶಾಂತೆಯು ಹಾಡು ಹಾಡುತ್ತಾ ಇದ್ದಳು

लड़कियाँ कथा सुन रही थीं ಹುಡುಗಿಯರು ಕಥೆಯನ್ನು ಕೇಳುತ್ತಾ ಇದ್ದರು.

## ಅಪೂರ್ಣ ಭೂತಕಾಲ

ಅಪೂರ್ಣ ಭೂತಕಾಲದಲ್ಲಿ ವರ್ತಮಾನಕಾಲದ ರೂಪಗಳಿಗೆ ಲಿಂಗ ವಚನಗಳಿಗನುಸರಿಸಿ था, थे, थी, थीं ಎಂಬ ಸಹಾಯ ಕ್ರಿಯಾಪದ ಗಳನ್ನು ಸೇರಿಸುತ್ತಾರೆ.

ಉದಾಹರಣೆ:—

मैं बाजार जाता था ನಾನು ಪೇಟೆಗೆ ಹೋಗುತ್ತಿದ್ದೆನು.

लड़के मैदान में खेलते थे ಹುಡುಗರು ಬೈಲಿನಲ್ಲಿ ಆಡುತ್ತಿದ್ದರು.

यमुना कपड़ा सीती थी ಯಮುನೆಯು ಅರಿವೆಯನ್ನು ಹೊಲಿಯುತ್ತಿದ್ದಳು

बहनें फल खा रही थीं ಸಹೋದರಿಯರು ಹಣ್ಣು ತಿನ್ನುತ್ತಿದ್ದರು.

## ಕಾರಣಾರ್ಥ (ಹೇತು ಹೇತು) ಭೂತ

ಕಾರಣಾರ್ಥ ಭೂತಕಾಲದಲ್ಲಿ ಎರಡು ವಾಕ್ಯಗಳಿರುತ್ತವೆ. ಒಂದು ಕಾರಣ ವಾಕ್ಯ ಮತ್ತೊಂದು ಕಾರ್ಯವಾಕ್ಯ "ಅವನು ಬಂದಿದ್ದರೆ ರಾಮನು ಹೋಗುತ್ತಿದ್ದನು." ಇಲ್ಲಿ ಮೊದಲನೆಯ ಭಾಗವು ಕಾರಣ ವಾಕ್ಯ, ಎರಡನೇ ಭಾಗವು ಕಾರ್ಯ ವಾಕ್ಯ. ಇಂತಹ ಕಾರಣ ಕಾರ್ಯವಾಕ್ಯಗಳಲ್ಲಿರುವ ಧಾತುಗಳಿಗೆ ಲಿಂಗವಚನಗಳಗನುಸರಿಸಿ ता, ते, ती, तीं ಎಂಬ ಪ್ರತ್ಯಯಗಳನ್ನು ಸೇರಿಸಿ ಕಾರಣ ವಾಕ್ಯವನ್ನು अगर ಅಥವಾ यदि ಎಂಬ ಪದಗಳಿಂದ ಪ್ರಾರಂಭಿಸಿ, ಕಾರ್ಯವಾಕ್ಯವನ್ನು तो ಎಂಬುದರಿಂದ ಪ್ರಾರಂಭಿಸಿದರೆ ಕಾರಣಾರ್ಥ (ಹೇತು ಹೇತು) ಭೂತಕಾಲವಾಗುತ್ತದೆ.

ಉದಾಹರಣೆ:—

अगर राम आता तो राधा जाती ರಾಮನು ಬಂದಿದ್ದರೆ ರಾಧೆಯು ಹೋಗುತ್ತಿದ್ದಳು.

अगर हम सुनते तो वे गातीं ನಾವು ಆಲಿಸಿದ್ದರೆ ಅವರು ಹಾಡುತ್ತಿದ್ದರು.

ಕಾರಣ ವಾಕ್ಯದ ಮೊದಲಿರುವ अगर ಶಬ್ದದ ಸಂಪೂರ್ಣ ಅರ್ಥವನ್ನು ಕಾರ್ಯ ವಾಕ್ಯದ ಮೊದಲಿನ तो ಎಂಬುದೇ ಸ್ಪಷ್ಟಪಡಿಸುವದರಿಂದ अगर ಪದವನ್ನು ವಿಕಲ್ಪವಾಗಿ ಲೋಪ ಮಾಡುವದುಂಟು. ಆದರೆ तो ವನ್ನು ಮಾತ್ರ ಲೋಪಿಸುವದಿಲ್ಲ.

ಉದಾಹರಣೆ:—

राम आता तो राधा जाती ರಾಮನು ಬಂದಿದ್ದರೆ ರಾಧೆಯು ಹೋಗುತ್ತಿದ್ದಳು.

हम सुनते तो वे गातीं ನಾವು ಆಲಿಸಿದ್ದರೆ ಅವರು ಹಾಡುತ್ತಿದ್ದರು.

### ಅಪೂರ್ಣಭೂತ

ಸಾಮಾನ್ಯ ವರ್ತಮಾನ ಕಾಲದ ರೂಪಕ್ಕೆ ಲಿಂಗವಚನಗಳಿಗೆ ಅನುಸರಿಸಿ था, थे, थी, थीं ಎಂಬ ಸಹಾಯ ಕ್ರಿಯಾಪದಗಳನ್ನು ಸೇರಿಸುವದರಿಂದ ಅಪೂರ್ಣ ಭೂತಕಾಲವಾಗುತ್ತದೆ.

ಉದಾಹರಣೆ:—

राम फल खाता था ರಾಮನು ಹಂಣು ತಿನ್ನುತ್ತಿದ್ದನು.

हम फल खाते थे ನಾವು ಹಂಣು ತಿನ್ನುತ್ತಿದ್ದೆವು.

सुशीला गीत गाती थी ಸುಶೀಲೆಯು ಪದ್ಯ ಹಾಡುತ್ತಿದ್ದಳು

लड़कियाँ गीत गाती थीं ಹುಡುಗಿಯರು ಪದ್ಯ ಹಾಡುತ್ತಿದ್ದರು

## ಅಭ್ಯಾಸ ೨೪.

| | | | |
|---|---|---|---|
| अजनबी | ಹೊಸಬ, ಅಪರಿಚಿತ | इंतजारी | ನಿರೀಕ್ಷಣೆ, ಪ್ರತೀಕ್ಷೆ |
| पेटू | ಹೊಟ್ಟೆಬಾಕ | बक | ಹರಟು |
| खुर्राटाले | ಗೊರಕೆ ಹೊಡಿ | मुल्तवी कर | ಮುಂದರಿಸು |
| जोश | ಹುರುಪು | स्थगित कर | ಮುಂದರಿಸು |
| पसीना | ಬೆವರು | छाप | ಮುದ್ರಿಸು |
| दुह | ಹಾಲುಕರೆ | कुचल | ತುಳಿ |

| | | | |
|---|---|---|---|
| मूंगफली | ನೆಲಗಡಲೆ | पिघल | ಕರಗು |
| परोस | ಬಡಿಸು | फूफी | ಸೋದರತ್ತೆ |
| | | बह | ಹರಿ |

**ಕನ್ನಡಕ್ಕೆ ಭಾಷಾಂತರಿಸಿರಿ:—**

१. राधा अपने घर में दूध दुह रही होगी। २. मोहन इस समय क्या करता होगा? ३. वे एक अजनबी की इंतजारी में थे। ४. जब मै उनके घर गया था तब वे गाना गा रही थीं। ५. अगर सुनंदा खाना परोसती तो उस पेटूका पेट भरता। ६. खेतो में काम करने वाले किसानों के शरीर से पसीना बह रहा था। ७. मेरा भाई रातमें खूब खुर्राटा लेता है। ८. उन्होंने आज की सभाको स्थगित किया होगा। ९. अगर वे अच्छी खबरें अपने समाचार पत्र में छापेंगे, तो उनके पत्र बहुत बिकेंगे। १० वसंत की फूफी घरमें मूंगफली खा रही होगी।

**ಹಿಂದುಸ್ತಾನಿಗೆ ಭಾಷಾಂತರಿಸಿರಿ:—**

೧. ಏಕೆ ಹೀಗೆ ಹರಟುತ್ತಿರುವಿರಿ? ೨ ಆ ಹೊಟ್ಟೆಬಾಕನು ಈಗ ಏನು ಮಾಡುತ್ತಾ ಇರಬಹುದು? ೩ ಸೀತೆಯು ಹಾಲು ಕೊಟ್ಟಿದ್ದರೆ ಹುಡುಗನು ಅಳುತ್ತಿದ್ದಿಲ್ಲ. ೪. ಚಂದ್ರಪ್ರಭೆಯು ಹುರುಪಿನಲ್ಲಿ ಈ ಹಾಡನ್ನು ಹಾಡಿರಬಹುದು. ೫. ನಾನು ಅವರ ಮನೆಗೆ ಹೋದಾಗ ಅವಳು ಊಟಕ್ಕೆ ಬಡಿಸುತ್ತಿದ್ದಳು, ೬. ಈ ದಿವಸ ಬಹಳ ಜನರು ಬಂದಿದ್ದಿಲ್ಲ, ಆದ ಕಾರಣ ಅವರು ಆ ಸಭೆಯನ್ನು ಮುಂದರಿಸಿರಬಹುದು.

೭. ಬಡವರ ಪರಿಸ್ಥಿತಿಯನ್ನು ನೋಡುವದರಿಂದ ಅವನ ಹೃದಯವು ಕರಗುವದು. ೮. ರಾಮನು ತನ್ನ ವೈರಿಗಳನ್ನು ಮೆಟ್ಟುವನು ೯. ಓಡುವವನ ಶರೀರದಿಂದ ಬೆವರು ಹರಿಯುತ್ತಿರಬಹುದು ೧೦. ಅಪರಿಚಿತ ಮನುಷ್ಯನು ಗೊರಕೆ ಹೊಡೆಯುತ್ತಿರಬಹುದು.

## ಪಾಠ ೨೫.

ಇತರ ಕಾಲಗಳು (ಮುಂದುವರಿದುದು)

### ಕೃದಂತಗಳು

ವರ್ತಮಾನ ಕೃದಂತ.

ಧಾತುವಿಗೆ ಲಿಂಗ ವಚನಗಳಿಗನುಸರಿಸಿ "ता" ಅಥವಾ "ता हुआ" ಎಂಬ ಪ್ರತ್ಯಯವನ್ನು ಸೇರಿಸುವದರಿಂದ ವರ್ತಮಾನ ಕಾಲಿಕ ಕೃದಂತವಾಗುತ್ತದೆ ಇದನ್ನು ವಿಶೇಷಣವಾಗಿಯೂ ಕ್ರಿಯಾ ವಿಶೇಷಣವಾಗಿಯೂ ಪ್ರಯೋಗಿಸುವರು.

ವಿಶೇಷಣವಾಗಿ ಉಪಯೋಗಿಸಿದಾಗ ಅದು ತನ್ನ ವಿಶೇಷಣದ ಲಿಂಗ ವಚನಗಳಿಗನುಸರಿಸುತ್ತದೆ.

ಉದಾಹರಣೆ:-

दौडता (हुआ) लड़का गिरता है ಓಡುವ ಹುಡುಗನು ಬೀಳುತ್ತಾನೆ.

चलती (हुई) गाड़ीमे मत उतरो ಚಲಿಸುವ ಗಾಡಿಯಿಂದ ಇಳಿಯಬೇಡಿರಿ.

रोते (हुए) बच्चोंको मत मारो ಅಳುವಂಥ ಹುಡುಗರನ್ನು ಹೊಡಿಯಬೇಡಿರಿ:

ಕ್ರಿಯಾ ವಿಶೇಷಣವಾಗಿ ಉಪಯೋಗಿಸಿದಾಗ ता ಎಂಬದು ते ಆಗುತ್ತದೆ.

ಉದಾಹರಣೆ:-

मैं पढ़ते पढ़ते सोता हूँ ನಾನು ಓದುತ್ತ ಓದುತ್ತ ಮಲಗುತ್ತೇನೆ.

सुलोचना खाते खाते हंसती है ಸುಲೋಚನೆಯು ಉಣ್ಣುತ್ತ ಉಣ್ಣುತ್ತ ನಗುತ್ತಾಳೆ.

हम लिखते लिखते बोलते हैं ನಾವು ಬರೆಯುತ್ತ ಬರೆಯುತ್ತ ಮಾತನಾಡುತ್ತೇವೆ.

बहने बोलते बोलते थक गयीं ಸಹೋದರಿಯರು ಮಾತನಾಡುತ್ತ ಮಾತನಾಡುತ್ತ ಆಯಾಸಗೊಂಡರು.

ಕರ್ತೃ ಮತ್ತು ಕರ್ಮಗಳಿಗೆ ವಿಭಕ್ತಿ ಪ್ರತ್ಯಯಗಳು ಸೇರಿದಾಗ ವರ್ತಮಾನ ಕೃದಂತವು ಕೆಳಗಿನ ರೂಪದಲ್ಲಿರುವದು.

ಉದಾಹರಣೆ:-

मोहनने इंदिराको आते हुए देखा ಮೋಹನನು ಇಂದಿರೆಯು ಬರುತ್ತಿದ್ದುದನ್ನು ನೋಡಿದನು.

आपने गोपालको कभी गाते हुए सुना है ? ತಾವು ಎಂದಾದರೂ ಗೋಪಾಲನು ಹಾಡುವದನ್ನು ಕೇಳಿರುವಿರಾ?

ವರ್ತಮಾನ ಕೃದಂತದ ಮುಂದೆ समय, वक्त ಎಂಬುದು ಬಂದರೆ ता ಎಂಬುದು ते ಆಗುತ್ತದೆ, ಮತ್ತು ಕರ್ತೃವು ಯಾವಾಗಲೂ ಷಷ್ಠಿ ವಿಭಕ್ತಿ ಪುಲ್ಲಿಂಗ ಬಹುವಚನದಲ್ಲಿರುತ್ತದೆ.

ಉದಾಹರಣೆ:-

गोपालके जाते समय ಗೋಪಾಲನು ಹೋಗುವಾಗ

मोहिनी के गाते समय ಮೋಹಿನಿಯು ಹಾಡುವಾಗ

हमारे खाते समय ನಾವು ಉಣ್ಣುವಾಗ

लड़कियों के काम करते समय ಹುಡುಗಿಯರು ಕೆಲಸ ಮಾಡುವಾಗ

## ಭೂತಕೃದಂತ

ಸಾಮಾನ್ಯ ಭೂತಕಾಲದ ರೂಪಕ್ಕೆ हुआ ಸೇರಿಸುವದರಿಂದ ಭೂತ ಕೃದಂತವಾಗುತ್ತದೆ. ಆದರೆ ಸಾಧಾರಣವಾಗಿ ಸಾಮಾನ್ಯ ಭೂತಕಾಲದ ರೂಪವನ್ನೇ ಭೂತಕೃದಂತವಾಗಿ ಉಪಯೋಗಿಸುತ್ತಾರೆ. ಇದನ್ನು ವಿಶೇಷಣವಾಗಿ ಉಪಯೋಗಿಸುತ್ತಾರೆ.

ಉದಾಹರಣೆ:—

सुनी (सुनी हुई) बात ಕೇಳಿದ ಮಾತು

खिला (खिला हुआ) कमल ಅರಳಿದ ಕಮಲ

पढ़ा लिखा मनुष्य ಓದು ಬರಹ ಬಲ್ಲ ಮನುಷ್ಯ

वह सोया (हुआ) है ಅವನು ಮಲಗಿದ್ದಾನೆ

## ಪೂರ್ವಕಾಲಿಕ ಕೃದಂತ

ಪೂರ್ವಕಾಲಿಕ ಕೃದಂತದಲ್ಲಿ ಧಾತುವಿಗೆ कर ಸೇರಿಸುತ್ತಾರೆ.

ಉದಾಹರಣೆ:—

मैं खाकर जाता हूँ ನಾನು ಉಂಡು ಹೋಗುತ್ತೇನೆ.

लड़की देखकर पढ़ती है ಹುಡುಗಿಯು ನೋಡಿ ಓದುತ್ತಾಳೆ.

यह बात सुनकर हमको आश्चर्य हुआ ಈ ಮಾತನ್ನು ಕೇಳಿ ನಮಗೆ ಆಶ್ಚರ್ಯವಾಯಿತು.

कर ಎಂಬುದರ ಪೂರ್ವಕಾಲಿಕ ಕೃದಂತವು कर कर ಎಂಬುದರ ಬದಲು कर के ಎಂದಾಗುತ್ತದೆ.

ಉದಾಹರಣೆ:—

मैं काम करके सोता हूँ ನಾನು ಕೆಲಸ ಮಾಡಿ ಮಲಗುತ್ತೇನೆ.

## ರೂಢ್ಯಾತ್ಮಕ (ನಿತ್ಯತಾಬೋಧಕ) ಕೃದಂತ

ಸಾಮಾನ್ಯಭೂತಕಾಲದ ಕ್ರಿಯಾಪದಕ್ಕೆ कर ಎಂಬ ಸಹಾಯಕ ಕ್ರಿಯಾಪದವನ್ನು ಸೇರಿಸಿದರೆರೂಢ್ಯಾತ್ಮಕ ಕೃದಂತವಾಗುತ್ತದೆ.

ಉದಾಹರಣೆ:—

मैं सिनीमा देखा करता हूँ  ನಾನು ಸಿನೀಮಾ ನೋಡುವ ವಾಡಿಕೆಯಲ್ಲಿದ್ದೇನೆ.

तुम हमेशा पढ़ा करो  ನೀವು ಯಾವಾಗಲೂ ಓದುತ್ತಾ ಇರಿ.

सीता हमेशा गाया करती है  ಸೀತೆಗೆ ಯಾವಾಗಲೂ ಹಾಡುವ ಅಭ್ಯಾಸವಿದೆ.

बहनें रोज़ क्या किया करती हैं  ಸಹೋದರಿಯರು ದಿನಾಲೂ ಏನು ಮಾಡುತ್ತಾರೆ?

जा ಎಂಬುದರ ಭೂತಕಾಲ ರೂಪವು ರೂಢ್ಯಾತ್ಮಕ ಕೃದಂತದಲ್ಲಿ जाया ಆಗುತ್ತದೆ.

ಉದಾಹರಣೆ:—

हम रोज़ उनके घर जाया करते हैं  ನಮಗೆ ಪ್ರತಿ ದಿವಸ ಅವರ ಮನೆಗೆ ಹೋಗುವ ಅಭ್ಯಾಸವಿದೆ.

ರೂಢ್ಯಾತ್ಮಕ ಕೃದಂತದಲ್ಲಿ "ने" ಪ್ರಯೋಗವಿಲ್ಲ.

वसंत बहुत दिनों तक पढ़ा किया  ವಸಂತನು ಬಹಳ ದಿನಗಳ ವರೆಗೆ ಓದುತ್ತಾ ಇದ್ದನು.

## ಅಭ್ಯಾಸ ೨೫.

| | | | |
|---|---|---|---|
| जब | ಯಾವಾಗ (ಸಂಬಂಧವಾಚಕ) | जहाँ | ಎಲ್ಲಿ |
| पीट | ಹೊಡೆ, ಬಡಿ | तहाँ | ಅಲ್ಲಿ |

रिश्वत ಲಂಚ
बोझा ಹೊರೆ
धोखा दे ಮೋಸಮಾಡು
अकेला ಒಬ್ಬಂಟಿಗ
बिगाड़ ಕೆಡಿಸು
बेशुमार ಅಸಂಖ್ಯ
घमंड ಗರ್ವ
झुक ಬಗ್ಗು
ललचा ಆಶಿಸು
हमला ಆಕ್ರಮಣ
खलिहान ಮೆದೆ, ತೆನೆರಾಶಿ

**ಕನ್ನಡಕ್ಕೆ ಭಾಷಾಂತರಿಸಿರಿ:—**

१. औरंगजे़ब की सेना हमला करते करते थक गयी। २. राजाने रिश्वत देकर शत्रुओंको अपनी और कर लिया। ३. मैं हर साल सफ़र के लिये जाया करता था। ४. हिन्दी आंदोलन अब सजीव, जोरदार और व्यापक हो गया है। ५. जब मैं उनके घर जाता हूँ तब अपने दोस्तको गाते देखा करता हू। ६. लड़के अपने साथियों को खाने की चीजें दिखाकर ललचाया करते हैं। ७. विद्यार्थी किसी सामानको बिगाडें तो उनको उस्ताद डांटा करेंगे। ८. दुश्मनों पर हमेशा सिपाही हमला करते हैं और दबाते रहते हैं। ९. किसान खलिहानों में अनाज इकठा किया करते थे। १०. जब मैं बनारस में पढ़ता तब मेरी मां मुझे रुपये भेजा करती थी।

**ಹಿಂದುಸ್ತಾನಿಗೆ ಭಾಷಾಂತರಿಸಿರಿ:—**

೧. ನೀವು ದಿನಾಲು ಸಾಯಂಕಾಲ ಮೈದಾನದಲ್ಲಿ ಆಡುತ್ತೀರಿ. ೨. ರಾಮನು ಒಬ್ಬನೇ ಯಾವಾಗಲೂ ಓದುತ್ತಿರುತ್ತಾನೆ. ೩. ನನ್ನ ತಂಗಿಯು ತನ್ನ ತವರುಮನೆಗೆ ಆಗಾಗ್ಗೆ ಬರುತ್ತಿರುತ್ತಾಳೆ. ೪. ಗೋಪಾಲನು

ಎಷ್ಟೋ ದಿನಗಳ ವರೆಗೆ ನದಿಗೆ ಹೋಗುತ್ತಿದ್ದನು ಮತ್ತು ಈಸುತ್ತಿದ್ದನು. ೫. ಹುಡುಗರು ನಮಗೆ ಆಗಾಗ್ಗೆ ಮೋಸ ಮಾಡುತ್ತಿದ್ದರು. ೬. ಚಿಕ್ಕ ಮಕ್ಕಳು ಸಾಮಾನುಗಳನ್ನು ಕೆಡಿಸುತ್ತಿರುತ್ತಾರೆ. ೭. ನಾವು ನಮ್ಮ ವೈರಿಗಳ ಗರ್ವವನ್ನು ಭಂಗ ಮಾಡುತ್ತಿದ್ದೆವು ೮. ನಾನು ನಿಮ್ಮ ಮನೆಗೆ ಬಂದಾಗ ನೀವು ಮನೆಯಲ್ಲಿಯೇ ಇರುವುದಿಲ್ಲ. ೯. ಸೀತೆಯು ನಮ್ಮ ಮನೆಗೆ ಬಂದು ಕೆಲಸ ಮಾಡುವ ವಾಡಿಕೆಯಲ್ಲಿದ್ದಳು. ೧೦. ದಿನಾಲು ವ್ಯಾಯಾಮವನ್ನು ಮಾಡುತ್ತಿದ್ದರೆ ಆರೋಗ್ಯವು ಚೆನ್ನಾಗಿರುತ್ತದೆ.

## ಪಾಠ ೨೬.

## पर, हो, चाहिये ದ ಪ್ರಯೋಗಗಳು.

पर ಎಂಬ ಪದವು ಕೆಳಗೆ ಕಾಣಿಸಿದ ಸಂದರ್ಭಗಳ ಅರ್ಥಗಳನ್ನು ಸೂಚಿಸುತ್ತದೆ.

सिपाही घोड़े पर बैठा है ಸಿಪಾಯಿಯು ಕುದುರೆಯಮೇಲೆ ಕುಳಿತಿದ್ದಾನೆ

तालाब पर मंदिर बना है ಕೆರೆಯ ಹತ್ತಿರ ದೇವಾಲಯವು ಕಟ್ಟಲ್ಪಟ್ಟಿದೆ.

एक कोस की दूरी पर हमारा गांव है ಒಂದು ಹರದಾರಿಯ ಮೇಲೆ ನಮ್ಮ ಊರು ಇದೆ.

राजा उस कन्या पर मोहित हो गये ರಾಜರು ಆ ಹುಡುಗಿಯ ಮೇಲೆ ಮೋಹಿತರಾದರು.

मेरे बोलने पर वह प्रसन्न हो गया ನಾನು ಮಾತನಾಡಿದ್ದಕ್ಕಾಗಿ ಅವನು ಸಂತೋಷ ಪಟ್ಟನು.

घरसे चिट्ठियों पर चिट्ठियों आती हैं ಮನೆಯಿಂದ ಪತ್ರಗಳ ಮೇಲೆ ಪತ್ರಗಳು ಬರುತ್ತವೆ.

समय पर वर्षा नहीं हुई ಸಮಯಕ್ಕೆ ಸರಿಯಾಗಿ (ಸಕಾಲದಲ್ಲಿ) ಮಳೆಯಾಗಲಿಲ್ಲ.

तुम अपनी बात पर नहीं रहते ನೀವು ನಿಮ್ಮ ಮಾತಿನಂತೆ ಇರುವುದಿಲ್ಲ.
भोजन करने पर पान खाना ಊಟ ಮಾಡಿದಮೇಲೆ ವಿಳ್ಯ ಹಾಕಬೇಕು.
लड़का छोटा होने पर भी चतुर है ಹುಡುಗನು ಚಿಕ್ಕವನಿದ್ದರೂ ಚತುರನಿದ್ದಾನೆ.

'ಆದರೆ' ಎಂಬರ್ಥದಲ್ಲಿ—पर मेरे मन में एक बात आई है ಆದರೆ ನನ್ನ ಮನಸ್ಸಿನಲ್ಲಿ ಒಂದು ವಿಚಾರ ಬಂದಿದೆ.

हो ಎಂಬುದು ಕೆಳಗೆ ಕಾಣಿಸಿದ ಅರ್ಥಗಳನ್ನು ಸೂಚಿಸುತ್ತದೆ.
वह घोड़ा सफेद है ಆ ಕುದುರೆಯು ಬೆಳ್ಳಗಿರುತ್ತದೆ.
आदमी के दो हाथ होते हैं ಮನುಷ್ಯನಿಗೆ ಎರಡು ಕೈಗಳಿರುತ್ತವೆ.
आपके घर में रोज़ गाना होता है ತಮ್ಮ ಮನೆಯಲ್ಲಿ ದಿನಾಲು ಸಂಗೀತವಾಗುತ್ತಿರುತ್ತದೆ.
वह मेरा भाई होता है ಅವನು ನನಗೆ ತಮ್ಮನಾಗಬೇಕು.
गंगा मेरी मौसी होती है ಗಂಗೆಯು ನನಗೆ ಚಿಕ್ಕಮ್ಮನಾಗಬೇಕು.

चाहिये ಎಂಬುದು ಸ್ವತಂತ್ರ ಕ್ರಿಯೆಗೆ ಸಮಾನವಾಗಿ ಉಪಯೋಗಿಸಲ್ಪಟ್ಟಾಗ ಇದರ ಅರ್ಥವು 'ಇಷ್ಟ' ಅಥವಾ 'ಬೇಕು' ಎಂದು ಆಗುತ್ತದೆ. ಸಂಯುಕ್ತ ಕ್ರಿಯೆಯಾಗಿ ಉಪಯೋಗಿಸಲ್ಪಟ್ಟಾಗ 'ಆವಶ್ಯಕತೆ' ಅಥವಾ 'ಕರ್ತವ್ಯ' ಎಂದು ಅರ್ಥವಾಗುತ್ತದೆ. ಇದರ ಪ್ರಯೋಗವು ಸಾಮಾನ್ಯವಾಗಿ ವರ್ತಮಾನ ಮತ್ತು ಸಾಮಾನ್ಯಭೂತ ಕಾಲದಲ್ಲಿಯೆ ಆಗುತ್ತದೆ. ಇದರ ಕರ್ತೃವು ಯಾವಾಗಲೂ ಚತುರ್ಥಿ ವಿಭಕ್ತಿಯಲ್ಲಿರುತ್ತದೆ.

ಇಷ್ಟಾರ್ಥ— मुझे दूध चाहिये ನನಗೆ ಹಾಲು ಬೇಕು.
तुमको क्या चाहिये? ನಿಮಗೇನು ಬೇಕು?

ಆವಶ್ಯಕತೆ— मुझे जाना चाहिये ನಾನು ಹೋಗಬೇಕು.
ಅಥವಾ ನಾನು ಹೋಗುವುದು ಅವಶ್ಯವಿದೆ.

ವರ್ತಮಾನ—आज मुझे पढ़ना चाहिये ಈ ದಿನ ನಾನು ಓದಬೇಕು.

ಸಾಮಾನ್ಯಭೂತ—कल मुझे बेंगलूर जाना चाहिये था ನಾನು
ನಿನ್ನೆ ಬೆಂಗಳೂರಿಗೆ ಹೋಗಬೇಕಾಗಿತ್ತು.

उसको कसरत करनी चाहिए थी ನಾನು
ವ್ಯಾಯಾಮ ಮಾಡಬೇಕಾಗಿತ್ತು.

## ಅಭ್ಯಾಸ ೨೬.

| | | | |
|---|---|---|---|
| कुम्हार | ಕುಂಬಾರ | हटा | ಸರಿಸು |
| जुलाहा | ನೇಕಾರ | बुन | ನೇಯು |
| गूंगा | ಮೂಕ | कहीं | ಎಲ್ಲಿಗೊ |
| खांसी | ಕೆಮ್ಮು | काढ़ा | ಕಷಾಯ |
| मेहमान | ಅತಿಥಿ | फिजूल | ವ್ಯರ್ಥ |
| जबान | ಭಾಷೆ | बादल | ಮೋಡ |
| खुल | ತೆರೆ, ಹೊರಡು | मुसाफ़िर | ಪ್ರಯಾಣಿಕ |
| मेहरबानी | ಉಪಕಾರ | बिता | ಕಳೆ |

ಕನ್ನಡಕ್ಕೆ ಭಾಷಾಂತರಿಸಿರಿ:—

१. मेहमान घर पर नहीं हैं, कहीं घूमने गये हैं। २. पेड़ के पत्ते हरे होते हैं। ३. हमें हिन्दुस्तानी में बोलना चाहिये। ४. हम समय पर स्टेशन नहीं पहुंचे, दोस्तों से भेंट नहीं हुई।

५. जुलाहे को अच्छा कपड़ा बुनना चाहिये। ६, मेरी बहनें कुम्हार के घर मिट्टी के बर्तन खरीदने गयी थीं पर वह घर पर नहीं था। ७. गरीबों पर दया करना चाहिये था। ८. गांधीजीसे मिलने आज आपको जाना चाहिय था। ९. गोवर्धन सैकल पर चढ़ता है। १०. आपको पीने के लिये क्या चाहिये ?

**ಹಿಂದುಸ್ತಾನಿಗೆ ಭಾಷಾಂತರಿಸಿರಿ:—**

೧. ರಾಮನು ಈ ದಿನ ಸಾಲೆಗೆ ಹೋಗಬೇಕಾಗಿತ್ತು. ೨. ಕುಂಬಾರರ ಮನೆಗಳು ಕೆರೆಯ ಹತ್ತಿರ ಇರುತ್ತವೆ. ೩. ನೀವು ಮನೆಯಲ್ಲಿ ಏನು ಮಾಡುತ್ತಿದ್ದಿರಿ? ೪. ನಾನು ಹುಬ್ಬಳ್ಳಿಗೆ ಹೋಗಿದ್ದಕ್ಕಾಗಿ ಅವನಿಗೆ ಬಹಳ ಆನಂದವಾಯಿತು ೫. ಸೀತೆಯು ಸಮಯಕ್ಕೆ ಸರಿಯಾಗಿ ನಮ್ಮ ಮನೆಗೆ ಬಂದಳು ೬. ಅತಿಥಿಗಳು ಸ್ನಾನಕ್ಕಾಗಿ ನದಿಗೆ ಹೋಗಿದ್ದಾರೆ. ೭. ಕೆಮ್ಮು ಬಂದರೆ ಕಷಾಯವನ್ನು ಕುಡಿಯಬೇಕು. ೮. ಈಗ ನಾವು ವ್ಯರ್ಥವಾಗಿ ಕಾಲವನ್ನು ಕಳೆಯಬಾರದು. ೯. ಮೋಡಗಳು ಬಂದವು ಆದರೆ ಮಳೆಯಾಗಲಿಲ್ಲ. ೧೦. ಮಳೆಗಾಲದಲ್ಲಿ ಹೊಲಗಳು ಹಸುರಾಗಿರುತ್ತವೆ.

## ಪಾಠ ೨೭.

### अगर ಮತ್ತು कि ಯ ಪ್ರಯೋಗಗಳು

अगर ಎಂಬದನ್ನು "ರೆ" ಎಂಬರ್ಥದಲ್ಲಿ ಉಪಯೋಗಿಸುತ್ತಾರೆ. ಇದರ ಕೂಡ तो ಎಂಬ ಪದವೂ ಉತ್ತರ ವಾಕ್ಯದಲ್ಲಿ ಬರುತ್ತದೆ.

ಉದಾ:— अगर तुम मन लगाकर पढ़ो तो परीक्षा में उत्तीर्ण होना आसान है ನೀನು ಮನಸ್ಸುಕೊಟ್ಟು ಓದಿದರೆ ಪರೀಕ್ಷೆಯಲ್ಲಿ ಉತ್ತೀರ್ಣನಾಗುವುದು ಸುಲಭ. अगर प्रतिज्ञा का पालन न किया तो मेरा

नाम केशव नहीं ನಾನು ಪ್ರತಿಜ್ಞೆಯನ್ನು ಪಾಲಿಸದಿದ್ದರೆ ನನ್ನ ಹೆಸರು ಕೇಶವನಲ್ಲ.

कि ಎಂಬುದು ಕೆಳಗೆ ಕಾಣಿಸಿದ ಅರ್ಥಗಳಲ್ಲಿ ಉಪಯೋಗಿಸುತ್ತಾರೆ.

'ಏನೆಂದರೆ' ಎಂಬರ್ಥದಲ್ಲಿ:- रामने कहा कि मैं गीत सुनाऊंगा ರಾಮನು ಹೇಳಿದನು ಏನೆಂದರೆ ನಾನು ಹಾಡನ್ನು ಹೇಳುವೆನು. मैं कहता हूं कि यह मेरी किताब नहीं है ನಾನು ಹೇಳುತ್ತೇನೆ ಏನೆಂದರೆ ಇದು ನನ್ನ ಪುಸ್ತಕವಲ್ಲ.

'ಕೂಡಲೇ' ಎಂಬರ್ಥದಲ್ಲಿ:— उसने मुझे कलम दी कि मैं जाऊंगा ಅವನು ನನಗೆ ಲೆಕ್ಕಣಿಕೆಯನ್ನು ಕೊಟ್ಟ ಕೂಡಲೆ ಹೋಗುವೆನು.

'ಅಥವಾ' ಎಂಬರ್ಥದಲ್ಲಿ:- तुम बोलोगे कि नहीं ? ನೀವು ಮಾತನಾಡುವಿರೋ ಅಥವಾ ಇಲ್ಲವೋ?

'ಇಷ್ಟರಲ್ಲಿ' ಎಂಬರ್ಥದಲ್ಲಿ: मेरा दोस्त गया ही था कि आप आ गये ನನ್ನ ಗೆಳೆಯನು ಹೋಗಿದ್ದನು, ಇಷ್ಟರಲ್ಲಿ ತಾವು ಬಂದುಬಿಟ್ಟಿರಿ.

## ಅಭ್ಯಾಸ ೨೭.

| | | | |
|---|---|---|---|
| ज़क | ಸೋಲು | तरह | ಬಗೆ, ತರ. |
| क्योंकि | ಏಕೆಂದರೆ | या | ಅಥವಾ |
| हुक्म | ಅಪ್ಪಣೆ | अगर | ರೆ |
| जितना | ಎಷ್ಟು | उतना | ಅಷ್ಟು |
| आसान | ಸುಲಭ | ज़िंदा | ಜೀವಿತ |

| | | | |
|---|---|---|---|
| मानो | ಏನೋ ಎಂಬಂತೆ | लगन | ತಲ್ಲೀನತೆ, ಲಕ್ಷ್ಯ |
| प्रथा | ರೂಢಿ | कास | ಬೈಯ್ಯು |
| खिलाफ | ವಿರುದ್ಧ | विमाता | ಮಲತಾಯಿ |
| भूल | ಮರೆ | नौकर | ಸೇವಕ |

**ಕನ್ನಡಕ್ಕೆ ಭಾಷಾಂತರಿಸಿರಿ,**

१. आप ऐसे बोलते हैं मानो मुख से फूल झड़ते हों। २. अगर वह जीता रहता तो पनेढ़ में मन लगाता। ३. हम चाहते हैं कि आप देश की मेवा करें। ४. घर की विधवा लड़की को हुक्म हो गया कि दस बजने मे पहलेही रसोई बनाये। ५. भोजन किया ही था कि आज्ञा हुई कि खेत जावो। ६. आप लोगों को ध्यानमें रखना चाहिये कि जब तक लगन से पढेंगे नहीं तब तक इसी वर्गमें रहना होगा। ७. अबसीनिया में यह प्रथा प्रचलित थी कि जब वहां के लोगोंको प्राणदंड मिलता था तब वे लोग अपने सरदारको अपने सिर के बदले अपनी युवती कन्या दे दिया करते थे। ८. अक्षरों की पहचान कराके फिर उनका नाम बताना चाहिये। ९. किसी के खिलाफ उपवास किसी हालत में नही करना चाहिय। १०. जान जाये पर मान न जाये

**ಹಿಂದುಸ್ತಾನಿಗೆ ಭಾಷಾಂತರಿಸಿರಿ:—**

೧. ನಮ್ಮ ಸ್ಕೂಲಿನಲ್ಲಿ ವಿದ್ಯಾರ್ಥಿಗಳು ಚೆನ್ನಾಗಿ ಮಾತನಾಡುತ್ತಾರೆ ಆದರೆ ಬರೆಯಲಾರರು. ೨. ನಾವು ಬೆಟ್ಟವನ್ನು ಏರುತ್ತಿದ್ದಾಗ ನಮಗೆ ಸೆಕೆಯಾಗುತ್ತಿದ್ದಿತು. ೩. ಸತ್ಯನಾರಾಯಣನು ಕಲಕತ್ತೆಗೆ

ಹೋಗಿ ಲೇಖಕನ ಕೆಲಸವನ್ನು ಪ್ರಾರಂಭಿಸಿದನು. ೪. ಮೆಲ್ಲಮೆಲ್ಲಗೆ ಅವನ ಕೆಲಸವು ಚೆನ್ನಾಗಿ ಸಾಗತೊಡಗಿತು. ೫. ಅವನಿಗೆ ಸುಖವು ಲಭಿಸಬೇಕಾಗಿದ್ದಿತು, ಆದರೆ ಅದು ಅವನ ತಮ್ಮನ ನೆನಪಿನಿಂದ ದೊರೆಯುತ್ತಿದ್ದಿಲ್ಲ. ೬. ಇಷ್ಟಾದರೂ ಅವನ ಮಲತಾಯಿಯ ಹೃದಯವು ಕರಗಲಿಲ್ಲ. ೭. ಅವಳು ದಿನಾಲು ಸೇವಕನನ್ನು ಹಳಿಯುತ್ತಿದ್ದಳು, ಏನೆಂದರೆ ಇವನಿಂದ ರಾಮನು ಕೆಟ್ಟು ಹೋಗಿದ್ದಾನೆ. ೮. ಹಿಂದೀ ಪ್ರಚಾರಕರು ತಮ್ಮ ಮುಂದೆ ವ್ಯಾಪಕವಾದ ಧ್ಯೇಯವನ್ನಿಟ್ಟುಕೊಂಡು ಕೆಲಸ ಮಾಡಬೇಕು. ೯. ಅವರು ತಮ್ಮ ಮಾತೃ ಭಾಷೆಯನ್ನು ಎಂದೂ ಮರೆಯಬಾರದು. ೧೦. ಯಾವಾಗ ನಾವು ರಾಷ್ಟ್ರಭಾಷೆಯಿಂದ ಹಿಂದುಸ್ತಾನವನ್ನು ಒಂದುಗೂಡಿಸುವೆವೂ ಆಗ ನಮಗೆ ಸ್ವರಾಜ್ಯವು ಸಿಕ್ಕುವುದು.

## ಪಾಠ ೨೮.

## ही ಶಬ್ದದ ಪ್ರಯೋಗ.

ही ಇದರ ಸಾಮಾನ್ಯ ಅರ್ಥವು "ಮಾತ್ರವೆ" ಯಾವ ಶಬ್ದದ ಮೇಲೆ ಸ್ವರಭಾರವನ್ನಿಡಬೇಕೋ ಅದರ ಮುಂದೆ ಬರುತ್ತದೆ.

ಉದಾಹರಣೆ:- राम ही जाता है ರಾಮನೇ ಹೋಗುತ್ತಾನೆ.

ಇದನ್ನು ಕೆಳಗೆ ಕಾಣಿಸಿದ ಪ್ರಕಾರ ಭಿನ್ನ ಭಿನ್ನ ಪ್ರಕಾರ ಉಪಯೋಗಿಸುತ್ತಾರೆ.

ಸಾಧಾರಣವಾಗಿ ಪ್ರತ್ಯೇಕಾರ್ಥವನ್ನು ತೋರಿಸುದಕ್ಕೆ "ಮಾತ್ರ" ಎನ್ನುವ ಅರ್ಥದಲ್ಲಿ ಇದನ್ನು ಉಪಯೋಗಿಸುತ್ತಾರೆ.

ಉದಾಹರಣೆ:—

एक ही उपाय है ಒಂದೇ ಉಪಾಯವಿದೆ.

मैं ही घरमें हूँ ನಾನೊಬ್ಬನೇ ಮನೆಯಲ್ಲಿದ್ದೇನೆ.

ಕೆಲವು ಸರ್ವನಾಮ ಮತ್ತು ಕ್ರಿಯಾವಿಶೇಷಣಗಳ ಮುಂದೆ ही ಎಂಬುದನ್ನು ಸೇರಿಸಿದರೆ ಅದು ಅವುಗಳಲ್ಲಿ ಬೆರೆತು ಹೋಗುತ್ತದೆ.

ಉದಾಹರಣೆ:—

| | |
|---|---|
| हम + ही = ನಾವೇ | तुम + ही = तुम्ही ನೀವೇ |
| वह + ही = वही ಅವನೇ<br>ಅದೇ | यह + ही = यही ಇವನೇ<br>ಇದೇ |
| उस + ही = उसी ಅವನೇ<br>ಅದೇ | इस + ही = इसही ಇವನೇ<br>ಇದೇ |
| उन + ही = उन्हीं ಅವರೇ ಅವೇ | इन + ही = इन्हीं ಇವರೇ<br>ಇವೇ |
| किस + ही = किसी ಯಾವನೇ,<br>ಯಾವದೇ | किन + ही = कीन्हीं |
| सब + ही = सभी ಎಲ್ಲರೂ | यहाँ + ही = यहीं ಇಲ್ಲೀ |
| वहाँ + हि = वहीं ಅಲ್ಲಿಯೇ | कहाँ + ही = कहीं ಎಲ್ಲೋ |
| तब + ही = तभी ಆಗಲೇ | |

ವರ್ತಮಾನ ಕೃದಂತದ ಜೊತೆಯಲ್ಲಿ ಸೇರಿಸಿದರೆ " ತಕ್ಷಣವೇ " ಎನ್ನುವ ಅರ್ಥವನ್ನು ಸೂಚಿಸುತ್ತದೆ.

ಉದಾಹರಣೆ:—

रामके आते ही मोहन चुप हो गया ರಾಮನು ಬಂದ ಕೂಡಲೆ ಮೋಹನನು ಸುಮ್ಮನಾದನು.

चिल्लाते ही बच्चा उठा ಅದರಿಂದ ಕೂಡಲೇ ಕೂಸು ಎಚ್ಚತ್ತಿತು.

ಯಾವದೇ ಕಾಲದಲ್ಲಾಗಲಿ ಕ್ರಿಯಾಪದದ ಕ್ರಿಯೆಯನ್ನು ದೃಢೀಕರಿಸಲು ಇದನ್ನು ಕ್ರಿಯಾಪದದೊಂದಿಗೆ ಉಪಯೋಗಿಸುತ್ತಾರೆ.

ಉದಾಹರಣೆ:-

हम जायंगे ही ನಾವು ಹೋಗೇ ಹೋಗುವೆವು.

शुशीला गयी ही ಸುಶೀಲೆಯು ಹೋಗೇ ಹೋದಳು

ಸಂಬಂಧವಾಚಕ ಸರ್ವನಾಮದ ಜೊತೆಯಲ್ಲಿ ही ಉಪಯೋಗಿಸಿದರೆ "ಅದೇ" ಎಂಬ ಅರ್ಥವಾಗುತ್ತದೆ.

ಉದಾಹರಣೆ:—

यह वही नाटक है जिसे मैने बेंगलूर में देखा था

ಬೆಂಗಳೂರಿನಲ್ಲಿ ನೋಡಿದಂಥ ನಾಟಕವೇ ಇದು.

वही बड़ा है जो दीन दुखियों की सेवा करता है

ಯಾವನು ಬಡವರ ಸೇವೆ ಮಾಡುವನೋ ಅವನೇ ದೊಡ್ಡವನು.

"ಆಗ" "ಆಗಲೇ" ಎಂಬ ಅರ್ಥವನ್ನು ಸೂಚಿಸುವುದರ ಸಲುವಾಗಿ ही ಇದನ್ನು ಸಂಬಂಧವಾಚಕ ಕ್ರಿಯಾವಿಶೇಷಣದಂತೆ ಉಪಯೋಗಿಸುತ್ತಾರೆ.

ಉದಾಹರಣೆ: —

गोपाल स्टेशन जाही रहा था कि गाड़ी निकल गयी

ಗೋಪಾಲನು ಸ್ಟೇಶನ್ನಿಗೆ ಹೋಗುತ್ತಿರುವಾಗಲೇ ಗಾಡಿಯು ಹೊರಟುಹೋಯಿತು.

वे भाषण कर ही रहे थे कि पानी बरसने लगा

ಅವರು ಭಾಷಣ ಮಾಡುತ್ತಿರುವಾಗಲೇ ಮಳೆಯು ಸುರಿಯಲಾರಂಭಿಸಿತು.

मोहन गाही रहा था कि लोग उठकर चल गये

ಮೋಹನನು ಹಾಡುತ್ತಿರುವಾಗಲೇ ಜನರು ಎದ್ದು ಹೊರಟುಹೋದರು.

# ಪಾಠ ೨೯.

## ಪ್ರೇರಣಾರ್ಥಕ ರೂಪಗಳು.

ಅಕರ್ಮಕ ಧಾತುಗಳು ಕೆಳಗೆ ಕಾಣಿಸಿದಂತೆ ಸಕರ್ಮಕ ಮತ್ತು ಪ್ರೇರಣಾರ್ಥಕ ರೂಪಗಳನ್ನು ಹೊಂದುತ್ತವೆ.

| ಅಕರ್ಮಕ | ಸಕರ್ಮಕ | ಪ್ರೇರಣಾರ್ಥಕ |
| --- | --- | --- |
| गिर ಬೀಳು | गिरा ಬೀಳಿಸು | गिरवा |

उठ, दौड, डर, जल, लग, उड़, पहुंच, लटक ಇವುಗಳು ಮೇಲಿನಂತೆ ರೂಪಾಂತರ ಹೊಂದುತ್ತವೆ.

| | | |
| --- | --- | --- |
| कट ಕಡಿದುಹೋಗು | काट ಕಡಿದುಹಾಕು | कटवा |

मर, निकल, बिगड़, लद ಇವುಗಳು ಮೇಲಿನಂತೆ ರೂಪಾಂತರ ಹೊಂದುತ್ತವೆ,

| | | |
| --- | --- | --- |
| फट ಹರಿದು ಹೋಗು | फाड़ ಹರಿದುಹಾಕು | फड़वा |
| टूट ಮುರಿದು ಹೋಗು | तोड़ ಮುರಿದುಹಾಕು | तुड़वा |
| बिक ಮಾರುಹೋಗು | बेच ಮಾರು | बिकवा |
| रुक ತಡೆದು ಹೋಗು | रोक ತಡೆ | रुकवा |

जा, आ, पा, ಮತ್ತು हो ಇವುಗಳು ರೂಪಾಂತರವನ್ನು ಹೊಂದುವದಿಲ್ಲ.

ಸಕರ್ಮಕ ಧಾತುಗಳು ಕೆಳಗೆ ಕಾಣಿಸಿದಂತೆ ರೂಪಗಳನ್ನು ತಾಳುತ್ತವೆ.

| ಸಕರ್ಮಕ | ಪ್ರೇರಣಾರ್ಥಕ | ಇಮ್ಮಡಿಪ್ರೇರಣಾರ್ಥಕ |
| --- | --- | --- |
| कर ಮಾಡು | करा ಮಾಡಿಸು | करवा |

पढ़, लिखा, समझ, सुन ಇವುಗಳು ಮೇಲಿನಂತೆ ರೂಪಾಂತರ ಹೊಂದುತ್ತವೆ.

| | | |
| --- | --- | --- |
| पी ಕುಡಿ | पिला ಕುಡಿಸು | पिलवा |
| खा ಉಂಣು | खिला ಉಣಿಸು | खिलवा |
| भेज ಕಳಿಸು | भिजा ಕಳಿಸಿಸು | भीजवा |

| | | | | | |
|---|---|---|---|---|---|
| सीख | ಕಲಿ | सिखा | ಕಲಿಸು | सिखवा | |
| दे | ಕೊಡು | दिला | ಕೊಡಿಸು | दिलवा | |
| देखा | ನೋಡು | दिखा | ತೋರಿಸು | दिखावा | |

## ಅಭ್ಯಾಸ ೨೮-೨೯

| | | | |
|---|---|---|---|
| कंबल | ಕಂಬಳಿ | पागुरकर | ಮೆಲಕಾಡಿಸು |
| मूसल | ಒನಿಕೆ | चूल्हा | ಒಲೆ |
| चोली | ಕುಪ್ಪಸ | मवेशी / जानवर | ಪಶು, ಚತುಷ್ಪಾದ |
| बरगद | ಆಲ (ಆಲದಮರ) | | |
| छाया | ನೆರಳು | उंगली | ಬೆರಳು, ಬಟ್ಟು |
| | | मुहँ | ಮುಖ, ಬಾಯಿ |
| | | बजा | ಬಾರಿಸು |

**ಕನ್ನಡಕ್ಕೆ ಭಾಷಾಂತರಿಸಿರಿ:—**

१. धूप तेज होते ही जानवर बरगदकी छायामें सोते हैं २. चूल्हे में आग सुलगाने का काम सुलोचना ही करती है ३. सभी उंगलीया बराबर नहीं होतीं ४. गांधीजी को देखते ही तुम्हीं क्यों नहीं बाजा बजाते? ५. यह वही चोली है जिसे नारायण मद्रास से लाया था.

**ಹಿಂದುಸ್ತಾನಿಗೆ ಭಾಷಾಂತರಿಸಿರಿ:—**

೧ ಯಾವನು ಬೆಂಗಳೂರಿನಿಂದ ಬಂದಿದ್ದನೋ ಅವನೇ ಈ ಕೆಲಸವನ್ನು ಮಾಡಿಸಿರುವನು. ೨ ಸೀತೆಯು ಬರುತ್ತಲೇ ಎಲ್ಲರೂ ನಗಹತ್ತಿದರು. ೩ ಮಾಲಿಕನು ಹೇಳಿದ ಕೂಡಲೇ ಆಳುಮಗನು ಕೂಸಿಗೆ ಉಣಿಸಹತ್ತಿದನು ೪. ಪಶುಗಳು ನೀರು ಕುಡಿದು ಆಲದ ಮರದ ನೆರಳಿನಲ್ಲಿ ಮೆಲಕಾಡಿಸುತ್ತವೆ. ೫. ಬಾಯಿಂದ ರಾಮನಾಮವು ಹೊರಟ ಕೂಡಲೇ ರಾವಣನು ಅವರನ್ನು ಹೊಡಿಸುತ್ತಿದ್ದನು.

## ಪಾಠ ೩೦

**ಗಾದೆಯ ಮಾತುಗಳು ಮತ್ತು ವಾಕ್ಪ್ರಚಾರಗಳು.**

अंधों में काना राजा ಕುರುಡರಲ್ಲಿ ಮೆಳ್ಳಗಂಣ ಶ್ರೇಷ್ಠ

जिसकी लाठी उसकी भैंस ಯಾರ ಅಧಿಕಾರವೋ ಅವರದೇ ರಾಜ್ಯ

धोबी का कुत्ता न घरका न घाटका ಕೆಲಸಕೆ ಬಾರದ ಅಂತರ ಪಿಶಾಚ

बगल में छूरी मुंह में राम राम ಬಗಲಲ್ಲಿ ದೊಣ್ಣೆ ಕೈಯ್ಯಲ್ಲಿ ಶರಣಾರ್ಥಿ

हाथ कंगन को आरसी क्या ಅಂಗೈ ಹುಣ್ಣಿಗೆ ಕನ್ನಡಿಯೇಕೆ?

राम मेरे कामों में रोड़े अटकाता है ರಾಮನು ನನ್ನ ಕೆಲಸದಲ್ಲಿ ಎಡರುಗಳನ್ನು ತಂದೊಡ್ಡುತ್ತಾನೆ

आपकी बातों से मैं बाज आया ನಿಮ್ಮ ಮಾತುಗಳಿಂದ ನಾನು ಬೇಸರಗೊಂಡೆನು

क्यों बैठे बैठे मक्खी मार रहे हो ಕುಳಿತುಕೊಂಡು ಏಕೆ ಕಾಲ ಕಳೆಯುತ್ತಿದ್ದೀ?

गाली सुनकर मोहन आग बबूला हुआ ಬೈಗಳನ್ನು ಕೇಳಿ ಮೋಹನನು ಕಿಡಿಕಿಡಿಯಾದನು.

उत्तीर्ण होने की खबर सुनते ही सुलोचना फूले अंग न समायी ಉತ್ತೀರ್ಣಳಾದ ಸುದ್ದಿಯನ್ನು ಕೇಳಿ ಸುಲೋಚನೆಯು ಬಹಳ ಸಂತೋಷಪಟ್ಟಳು.



# ನಮ್ಮಲ್ಲಿ ಸಿಗತಕ್ಕ ಕನ್ನಡ ಪುಸ್ತಕಗಳು.

**ಅಚ್ಚಿನಲ್ಲಿ ಇರುವ ಗ್ರಂಥಗಳು**

# ಕನ್ನಡ ಹಿಂದೀ ನಿಘಂಟು

**ನಿತ್ಯೋಪಯೋಗಿ ಕನ್ನಡ ಶಬ್ದಗಳ ಅರ್ಥ ಹಿಂದಿಯಲ್ಲಿ**

ಸ್ವಂತ ಪ್ರಯತ್ನದಿಂದ ಹಿಂದೀ ಭಾಷೆಯನ್ನು ಕಲಿಯಬೇಕೆನ್ನು ವವರಿಗೂ, ವ್ಯವಹಾರ ಕ್ಷೇತ್ರದ ಪ್ರವಾಸಿಕರಿಗೂ, ವಿದ್ಯಾರ್ಥಿಗಳಿಗೂ ಅನುಕೂಲವಾಗುವಂತೆ ನಾವು "ಕನ್ನಡ ಹಿಂದೀ" ಕೋಶವನ್ನು ತಯಾರು ಮಾಡಿಸಿದ್ದೇವೆ. ಇದರಲ್ಲಿ ಬಹಳ ಉಪಯುಕ್ತವಾದ ಹಾಗೂ ವಿಶೇಷ ಬಳಕೆಯಲ್ಲಿರುವ ಕನ್ನಡ ಶಬ್ದಗಳನ್ನೂ ಅವುಗಳ ಹಿಂದೀ ಅರ್ಥವನ್ನೂ ಸಂಗ್ರಹಿಸಲಾಗಿದೆ.

# ಹಿಂದುಸ್ತಾನಿ ಪ್ರವೇಶಿಕೆ

**[ ಅಕ್ಷರಾಭ್ಯಾಸ ಮೊದಲ್ಗೊಂಡು ಪ್ರಾಥಮಿಕ ಪಾಠಗಳು]**

ಮುಂಬಯಿ ಕರ್ನಾಟಕದ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆ ಗಳಲ್ಲಿ ಹಿಂದೀ ಭಾಷೆಯನ್ನು ಕಲಿಯತಕ್ಕ ವಿದ್ಯಾರ್ಥಿಗಳಿಗೆ ಇದು ಕೈಗನ್ನ ಡಿಯಂತಿದೆ. ಈಗಿರುವ ಹಿಂದುಸ್ತಾನೀ ಪಠ್ಯ ಪುಸ್ತಕಗಳು ಕನ್ನಡ ಮಕ್ಕಳಿಗೆ ಸ್ವಲ್ಪ ಕಠಿಣವಾಗಿರುವದರಿಂದ ನಮ್ಮ " ಪ್ರವೇಶಿಕೆ " ಯ ಮುಖಾಂತರ ಅಭ್ಯಾಸ ನಡೆದರೆ ವಿದ್ಯಾರ್ಥಿಗಳ ಭಾಷಾ ಜ್ಞಾನವು ಬೇಗನೆ ವೃದ್ಧಿಯಾಗುವದರಲ್ಲಿ ಸಂದೇಹವಿಲ್ಲ

ದಕ್ಷಿಣ ಭಾರತ ಹಿಂದೀ ಪ್ರಚಾರ ಸಭೆಯ ಪರೀಕ್ಷೆಗಳಿಗೆ ಬೇಕಾದ ಎಲ್ಲ ವಿಧವಾದ ಹಿಂದೀ ಪುಸ್ತಕಗಳೂ ಮತ್ತು ಕನ್ನಡ, ಮರಾಠಿ, ಇಂಗ್ಲೀಷ ಶಾಲೋಪಯೋಗಿ ಪುಸ್ತಕಗಳೂ ನಮ್ಮಲ್ಲಿ ದೊರೆಯುತ್ತವೆ.